# ಗಿಡ ಮೊದಲಾ!
# ಬೀಜ ಮೊದಲಾ?




*Author :*
**The Only GURU of Three Religions**
**The Spiritual Emperor, Thraitha Theorem Originator**
**Sri Acharya Prabodhananda Yogeeshwarulu**

**www.thraithashakam.org**





# ಗಿಡ ಮೊದಲಾ!
# ಬೀಜ ಮೊದಲಾ?


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ಗ್ರಂಥಕರ್ತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**

---






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಡಿಸೆಂಬರ್ –2016

ಪ್ರತಿಗಳು : 1000 **ಬೆಲೆ. 45/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ - ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : ಲಕ್ಷ್ಮಿನಾರಾಯಣಾಚಾರಿ–09440556968. ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವನೆ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವನೆಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವನೆಯನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಗಿಡ ಮೊದಲಾ! ಬೀಜ ಮೊದಲಾ? 

ನಮಗೆ ಗಿಡ ಗೊತ್ತು, ಬೀಜನೂ ಗೊತ್ತು. ಗಿಡದಿಂದ ಬೀಜ ಬರುತ್ತಿದೆ, ಬೀಜದಿಂದ ಗಿಡ ಹುಟ್ಟುತ್ತಿದೆಯೆಂದು ಎಲ್ಲರಿಗೂ ತಿಳಿದಿರುವ ವಿಷಯ. ಹಾಗೆಯೇ ಗಿಡ ಇಲ್ಲದ್ದು ಬೀಜವಿಲ್ಲವೆಂದು, ಬೀಜವಿಲ್ಲದ್ದು ಗಿಡನೂ ಇಲ್ಲವೆಂದು ಕೂಡಾ ತಿಳಿದ ವಿಷಯ. ಆದರೆ ಯಾರಿಗೂ ಸಿಗದ (ಉತ್ತರವಿಲ್ಲದ) ಪ್ರಶ್ನೆ ಒಂದು ಇದೆ. ಅದೇನೆಂದರೆ! ಸೃಷ್ಟಿಯಲ್ಲಿ ಗಿಡ ಮೊದಲು ಹುಟ್ಟಿದೆಯಾ ಅಥವಾ ಬೀಜ ಮೊದಲು ಹುಟ್ಟಿದೆಯಾ? ಎನ್ನುವುದೇ ಮುಖ್ಯವಾದ ಪ್ರಶ್ನೆಯಾಗಿ ಉಳಿದಿದೆ. ಆದರೆ ಈ ಪ್ರಶ್ನೆಗೆ ಯಾವ ತರಹದ ಸಮಾಧಾನ ಹೇಳಿದರೂ ಕೊನೆಗೆ ಪ್ರಶ್ನೆಯೇ ಉಳಿಯುತ್ತದೆ. ಪ್ರಪಂಚದಲ್ಲಿ ಗಿಡ ಮೊದಲು ಹುಟ್ಟಿದೆ ಎಂದು ಹೇಳಿದರೆ, ಬೀಜ ಇಲ್ಲದೇ ಗಿಡ ಹೇಗೆ ಹುಟ್ಟುಬಲ್ಲದು? ಎನ್ನುವ ಪ್ರಶ್ನೆ ಬರುತ್ತದೆ. ಒಂದು ವೇಳೆ ಬೀಜ ಮೊದಲು ಹುಟ್ಟಿದೆ ಎಂದು ಹೇಳಿದರೆ, ಗಿಡ ಇಲ್ಲದೇ ಬೀಜ ಹೇಗೆ ಹುಟ್ಟಿದೆ ಎನ್ನುವ ಪ್ರಶ್ನೆ ಬರುತ್ತದೆ? ಈ ವಿಧವಾಗಿ ಹೇಗೆ ಉತ್ತರ ಹೇಳಿದರೂ ಕೊನೆಗೆ ಪ್ರಶ್ನೆ ಉಳಿಯುತ್ತದೆ ಉತ್ತರ ಇರುವುದಿಲ್ಲ. ಆದ್ದರಿಂದ ಇದು ಎಲ್ಲರಿಗೂ ಭಗೆಹರಿಯದ ಪ್ರಶ್ನೆಯಾಗಿ ಉಳಿದುಹೋಗಿದೆ.

ಆದರೆ **"ತ್ರೈತ ಸಿದ್ಧಾಂತ ಜ್ಞಾನದ"** ಪ್ರಕಾರ ಪ್ರಪಂಚದಲ್ಲಿಯೇ ಉತ್ತರ ಹೇಳಲಾರದ ಪ್ರಶ್ನೆ ಒಂದೇವೊಂದು ಇದೆ. ಆ ಒಂದನ್ನು ಹೊರತು ಉಳಿದ ಉತ್ತರ ಇಲ್ಲದ ಪ್ರಶ್ನೆ ಯಾವುದೂ ಇಲ್ಲವೆಂದು ಹೇಳಬಹುದು. ಪ್ರತಿಯೊಂದು ಪ್ರಶ್ನೆಗೂ ಉತ್ತರವಿದೆ. 'ಎಲ್ಲಿ ಉತ್ತರವಿದೆಯೊ ಅದು ಉಳಿದಿರುವಂತಹದು ಎಂದೂ, ಎಲ್ಲಿ ಉತ್ತರ ಸಿಗುವುದಿಲ್ಲವೊ ಅಲ್ಲಿ ತಿಳಿಯದತನ ಎಂದೂ' ಹೇಳಬಹುದು. ಜ್ಞಾನವಿರುವ ಪ್ರತಿಕಡೆ ತಿಳಿದಿರುವಂತಹದು ಇದೆ. ಆದ್ದರಿಂದ ತ್ರೈತ ಸಿದ್ಧಾಂತ ಜ್ಞಾನವನ್ನು ಅಂದರೆ **ಮೂರು ಆತ್ಮಗಳ ಜ್ಞಾನವನ್ನು** ತಿಳಿದು ಯಾರಾದರೂ ಆ ಒಂದು ಪ್ರಶ್ನೆಗೆ ಹೊರತು ಉಳಿದ ಎಲ್ಲಾ ಪ್ರಶ್ನೆಗಳಿಗೆ ಉತ್ತರ ಹೇಳುವವರು. ಗಿಡ ಮೊದಲಾ ಬೀಜ ಮೊದಲಾ? ಎನ್ನುವ ಪ್ರಶ್ನೆ ಆ ಒಂದು ಪ್ರಶ್ನೆಗಿಂತ ಬೇರೆಯಾಗಿರುವುದರಿಂದ ಈ ಪ್ರಶ್ನೆಗೆ ಖಚಿತವಾಗಿ ಉತ್ತರವಿದೆ ಎಂದು ಹೇಳಬಹುದು.

**ಪ್ರಶ್ನೆ :– ನೀವು ಇದಕ್ಕೂ ಮೊದಲು ಉತ್ತರವಿಲ್ಲದ ಪ್ರಶ್ನೆ ಒಂದು ಇದೆಯೆಂದು ಹೇಳಿದ್ದೀರಾ. ನೀವು ಹೇಳಿದರೂ ಹೇಳದಿದ್ದರೂ ಉತ್ತರವಿಲ್ಲದ ಪ್ರಶ್ನೆ ಮೊಟ್ಟೆ ಮೊದಲಾ ಕೋಳಿ ಮೊದಲಾ? ಗಿಡ ಮೊದಲಾ, ಬೀಜ ಮೊದಲಾ? ಈ ಪ್ರಶ್ನೆಗಳು ಎರಡು ಆದರೂ ಪ್ರಶ್ನೆಯ ನಮೂನೆ ಒಂದೆಯಾಗಿರುವುದರಿಂದ, ಪ್ರಶ್ನೆಯಲ್ಲಿರುವ ಉದ್ದೇಶ ಒಂದೇ ವಿಧವಾಗಿರುವುದರಿಂದ ಈ ಎರಡು ಪ್ರಶ್ನೆಗಳನ್ನು ಸೇರಿಸಿ ಒಂದೇ ಪ್ರಶ್ನೆಯಾಗಿ ಪರಿಗಣಿಸುತ್ತಿದ್ದೇವೆ. ಅದನ್ನೇ ಗಿಡ ಮೊದಲಾ, ಬೀಜ ಮೊದಲಾ? ಎಂದು ಎಲ್ಲರೂ ಕೇಳುವುದು ನಡೆಯುತ್ತಿದೆ. ಇದು ಪ್ರಪಂಚದಲ್ಲಿಯೇ ಉತ್ತರವಿಲ್ಲದ ಪ್ರಶ್ನೆಯಾಗಿ ಎಲ್ಲರೂ ಹೇಳಿಕೊಳ್ಳುತ್ತಿದ್ದಾರೆ. ಈಗ ನೀವು ಈ ಪ್ರಶ್ನೆಗೆ ಉತ್ತರವಿದೆ ಎಂದು ವಿಚಿತ್ರವಾಗಿ ಹೇಳಿದ್ದೀರಾ. ಈ ಪ್ರಶ್ನೆಯನ್ನು ಕುರಿತು ನೀವು ಪರಿಶೋಧನೆ ಮಾಡಿದ್ದೀರಾ? ಎಂದು ನಾನು ಕೇಳುತ್ತಿದ್ದೇನೆ.**

**ಉತ್ತರ :–** ಪ್ರಪಂಚದಲ್ಲಿನ ಪ್ರತಿಯೊಂದು ಪ್ರಶ್ನೆಗೂ ಪರಿಶೋಧನೆ ಮಾಡಬೇಕಾದ ಅವಶ್ಯಕತೆ ಇಲ್ಲ, 'ಪರಿಶೀಲನೆ'ಯಿಂದ ನೋಡಿದರೆ ಸಾಕು. ನಾನು ಪರಿಶೀಲನೆಯಿಂದ ನೋಡಿ ಉತ್ತರ ಗ್ರಹಿಸಿದ್ದೇನೆ, ಆದ್ದರಿಂದ ಈ ಪ್ರಶ್ನೆ ಉತ್ತರವಿರುವ ಪ್ರಶ್ನೆಯೇ ಎಂದು ಹೇಳುತ್ತಿದ್ದೇನೆ. ನನಗೆ ಇದರ ಉತ್ತರ ತಿಳಿದಿದೆ.

**ಪ್ರಶ್ನೆ :– ಉತ್ತರ ತಿಳಿದಿದೆ ಎಂದು ಯಾವುದೋ ಒಂದು ಹೇಳಿದರೆ ಸರಿಹೋಗುವುದಿಲ್ಲ. ಆ ಉತ್ತರ ಶಾಸ್ತ್ರಬದ್ಧವಾಗಿರಬೇಕು, ಪುನಃ ಆ ಪ್ರಶ್ನೆ ಬಾರದೆ ಇರಬೇಕು. ಈ ವಿಷಯದಲ್ಲಿ ಉತ್ತರ ಹೇಳುವುದಕ್ಕೆ ಪರಿಶೋಧನೆ ಮುಖ್ಯ. ಪರಿಶೋಧನೆ ಮಾಡುತ್ತಿರುವಾಗ ಯಾವುದಾದರೆ ತಿಳಿಯುತ್ತಿದೆಯೊ, ಅದನ್ನು ಪರಿಶೀಲಿಸಿ ನೋಡುವುದಾದರೆ ಆಗ ಉತ್ತರ ಪೂರ್ತಿಯಾಗಿ ಅರ್ಥವಾಗುತ್ತದೆ. ಆದರೆ ಈ ವಿಷಯದಲ್ಲಿ ಪರಿಶೋಧನೆ ಮಾಡುವುದಕ್ಕೆ ಮಾರ್ಗವೇ ಸಿಗುವುದಿಲ್ಲ. ಒಂದು ಮಾರ್ಗವನ್ನು ಆಯ್ಕೆ ಮಾಡಿಕೊಂಡರೆ ಅದಕ್ಕಿಂತ ಒಳ್ಳೆಯ ಮಾರ್ಗ ಮತ್ತೊಂದು ಇರುತ್ತದೆ. ಎಷ್ಟು ಸಲ ಎಷ್ಟು ಮಾರ್ಗಗಳನ್ನು ಆಯ್ಕೆಮಾಡಿಕೊಂಡರೂ ಅದಕ್ಕಿಂತ ಒಳ್ಳೆಯ ಮಾರ್ಗ ಇರುವುದರಿಂದ ಆ ವಿಷಯದಲ್ಲಿ ಪರಿಶೊಧನೆ**

**ಇಲ್ಲವೆಂದೇ ಹೇಳಬಹುದು. ಅಂತಹ ವಿಷಯಕ್ಕೆ ನೀವು ಉತ್ತರ ಹೇಳುತ್ತೇನೆಂದು ಹೇಳಿದರೂ ನಾವು ಹೇಗೆ ನಂಬಬೇಕು?**

**ಉತ್ತರ :–** ನಂಬುವುದು, ಬಿಡುವುದು ಅದು ನಿಮ್ಮ ಇಷ್ಟದ ಮೇಲೆ ಆಧಾರವಾಗಿದೆ. ಇಲ್ಲಿಯವರೆಗೂ ನಾವು ಯಾವುದನ್ನು 'ನೀವು ನಂಬಿರಿ' ಎಂದು ಹೇಳಲಿಲ್ಲ. ನಿಮಗೆ ಸತ್ಯ ಎನಿಸಿರುವುದನ್ನು ನಂಬಬಹುದು. ಅಸತ್ಯವೆನಿಸಿರುವುದನ್ನು ನಂಬದಿರಬಹುದು. ಆದರೆ ನೀವು ಸತ್ಯವೆಂದು ಕೊಂಡಿರುವವೆಲ್ಲ ಸತ್ಯವಾಗದೆ ಅಸತ್ಯವಾಗಿರಬಹುದು. ಹಾಗೆಯಾ ನೀವು ಅಸತ್ಯವೆಂದುಕೊಂಡಿರುವವೆಲ್ಲಾ, ಅಸತ್ಯವಾಗಿರದೆ ಸತ್ಯವಾಗಿ ಕೂಡಾ ಇರಬಹುದು. ಶಾಸ್ತ್ರಬದ್ಧವಾದ ವಿಷಯಕ್ಕೆ ಬಂದರೆ ಯಾವುದನ್ನು ಯಾವ ಶಾಸ್ತ್ರದಿಂದ ನೋಡಬೇಕೊ ತಿಳಿಯದಿದ್ದರೆ ಅದು ಪೂರ್ತಿ ತಿಳಿಯದಂತಾಗುತ್ತದೆ. ನೀವು "ಪರಿಶೋಧನೆ" ಎಂಬ ಪದವನ್ನು ಬಳಸಿದ್ದೀರ, ತಿಳಿಯದಿರುವುದನ್ನು ತಿಳಿಯಬೇಕೆಂದುಕೊಂಡಾಗ 'ಪರಿಶೋಧನೆ' ಅಗತ್ಯವಿದೆ. ಯಾವ ಪರಿಶೋಧನೆ ಮಾಡಬೇಕೆಂದುಕೊಳ್ಳದೆಯೇ ಆ ವಿಷಯ ತಿಳಿದುಬಂದಾಗ ಪರಿಶೋಧನೆ ಅಗತ್ಯವಿಲ್ಲ. ಆಗ 'ಪರಿಶೀಲನೆ' ಮಾತ್ರವೇ ಎಂದರೆ ಜಾಗ್ರತೆಯಾಗಿ ನೋಡುವುದು ಅಥವಾ ತಿಳಿದುಕೊಳ್ಳುವುದು ಮಾತ್ರ ಅಗತ್ಯ. ಗಿಡ ಮೊದಲಾ, ಬೀಜ ಮೊದಲಾ? ಎನ್ನುವ ವಿಷಯದಲ್ಲಿ ನಾನು ಯಾವ 'ಪರಿಶೋಧನೆ' ಮಾಡಲಿಲ್ಲ. ಪರಿಶೋಧನೆ ಮಾಡದೆಯೇ ನನಗೆ ಈ ವಿಷಯ ತಿಳಿದುಬಂದಿದೆ. ಆದ್ದರಿಂದ ಈ ಪ್ರಶ್ನೆಗೆ ಉತ್ತರ ಇದೆಯೆಂದು ಹೇಳುತ್ತಿದ್ದೇನೆ.

**ಪ್ರಶ್ನೆ :– ಗಿಡ ಮೊದಲಾ, ಬೀಜ ಮೊದಲಾ? ಎನ್ನುವ ಪ್ರಶ್ನೆ ಪರಿಶೋಧನೆಗಳಿಗೆ ಸಿಗದ ಉತ್ತರವೆಂದು, ಆದ್ದರಿಂದ ಇದು ಉತ್ತರವಿಲ್ಲದ ಪ್ರಶ್ನೆಯೆಂದು ಎಲ್ಲರೂ ಹೇಳುತ್ತಿರುವಾಗ ನೀವು ಪರಿಶೋಧನೆ ಇಲ್ಲದಿದ್ದರು ಉತ್ತರ ತಿಳಿದಿದೆಯೆಂದು ಹೇಳುವುದು ಆಶ್ಚರ್ಯವಾಗಿದೆ. ಪರಿಶೋಧನೆ ಎಂದರೆ ಏನೋ ತಿಳಿದಿದೆಯಾ ಎಂದು ನಾನು ಕೇಳುತ್ತಿದ್ದೇನೆ.**

**ಉತ್ತರ :– "ಪರಿಶೋಧನೆ"** ಎಂಬ ಪದವು ಎರಡು ಭಾಗಗಳಾಗಿದೆ. "ಪರಿ"

ಮತ್ತು 'ಶೋಧನೆ' ಎನ್ನುವ ಪದಗಳು ಎರಡಿವೆ. "ಪರಿಶೋಧನೆ" ಪದದ ಅರ್ಥವನ್ನು ನಿಮಗೆ ಹೇಗೆ ತಿಳಿದಿದೆಯೋ ಏನೊ, ನೀವು 'ಪರಿಶೋಧನೆ' ಎಂದರೆ ಏನೆಂದು ತಿಳಿದಿದೆಯಾ? ಎಂದು ನನ್ನನ್ನು ಪ್ರಶ್ನಿಸುತ್ತಿದ್ದಾರೆ. ಅದೇ ಪ್ರಶ್ನೆಯನ್ನು ನಾನು ಪುನಃ ಪ್ರಶ್ನಿಸುತ್ತಿದ್ದೇನೆ. ಪರಿಶೋಧನೆಯೊಂದರ ನಿಜವಾದ ಅರ್ಥ ಯಾವ ಮನುಷ್ಯನಿಗೂ ತಿಳಿದಿಲ್ಲವೆಂದೇ ಹೇಳಬಹುದು. ಏಕೆಂದರೆ! **ಆಧ್ಯಾತ್ಮಿಕ ಅನುಬಂಧನದಿಂದ** ಅದರ ಅರ್ಥ ಕೂಡಿಕೊಂಡಿರುತ್ತದೆ. ಪ್ರತಿಯೊಬ್ಬರೂ ಆ ಪದವನ್ನು ಬಳಸುತ್ತಿದ್ದರೂ ಅದರ ನಿಜವಾದ ಅರ್ಥ ತಿಳಿದಿಲ್ಲವೆಂದೇ ಹೇಳಬಹುದು. ನಿಮಗೆ ತಿಳಿದಿರುವ ಅರ್ಥ "ಪರಿಶೋಧನೆ" ಎಂದರೆ 'ಪೂರ್ತಿ ಶೋಧನೆ ಮಾಡುವುದು' ಅಥವಾ 'ಪೂರ್ತಿಯಾಗಿ ಹುಡುಕುವುದು' ಎನ್ನುವ ಅರ್ಥ. ಈ ಅರ್ಥದ ಮೇಲೆ ನೀವು ನನ್ನನ್ನು ಪ್ರಶ್ನಿಸುತ್ತಿದ್ದೀರಾ. "ಪರಿಶೋಧನೆ ಇಲ್ಲದೇ ಕೇವಲ ಪರಿಶೀಲನೆಯಿಂದಲೇ ಈ ವಿಷಯ ತಿಳಿದಿದೆ." ಎಂದು ನಾನು ಹೇಳಿದಾಗ, "ಹುಡುಕದೆ ಹೇಗೆ ತಿಳಿಯುತ್ತದೆ?" ಎಂದು ನೀವು ನನ್ನನ್ನು ಪ್ರಶ್ನಿಸಿ ಕೇಳಿದಾಗ, ಪರಿಶೋಧನೆ ಇಲ್ಲದೆ ಹೇಗೆ ತಿಳಿಯುತ್ತದೆ? ಎಂದೂ, ಪರಿಶೋಧನೆ ಎಂದರೆ ಏನೂ ತಿಳಿದಿದೆಯಾ? ಎಂದು ಕೇಳುವುದು ನಡೆದಿದೆ. ನನ್ನನ್ನು ನೀವು ಪ್ರಶ್ನಿಸಿದ್ದೀರ ಚೆನ್ನಾಗಿದೆ. ಅದಕ್ಕೆ ಉತ್ತರ ಹೇಳುವ ಜವಾಬ್ದಾರಿ ನನ್ನದೇ ಆಗಿರುವುದರಿಂದ ನಾನು ಉತ್ತರ ಹೇಳುವುದರಲ್ಲಿನ ಭಾಗವಾಗಿ ನಿಮ್ಮನ್ನು ಈ ಪ್ರಶ್ನೆಯನ್ನು ಪುನಃ ಕೇಳುತ್ತಿದ್ದೇನೆ.

ಕೇಳಿದ ಪ್ರಶ್ನೆಯನ್ನು ಪುನಃ ಪ್ರಶ್ನೆಯಾಗಿ ಕೇಳುವುದು ಉತ್ತರದಲ್ಲಿನ ಭಾಗವೇ ಎಂದು ನಾವು ಹೇಳುವುದು ನಿಮಗೆ ಆಶ್ಚರ್ಯವಾಗಿದ್ದರೂ ನಾವು ಮಾತ್ರ ವಿಧಿಯಾಗಿ ಅದೇ ಪ್ರಶ್ನೆಯನ್ನು ಕೇಳಬೇಕಾಗಿ ಬಂದಿದೆ. ಅದಕ್ಕೆ ನೀವು ಉತ್ತರ ಹೇಳಿದರೆ ಹುಡುಕುವುದು, ಚೆನ್ನಾಗಿ ಹುಡುಕುವುದು, ಪೂರ್ತಿಯಾಗಿ ಹುಡುಕುವುದು ಎಂದು ಹೇಳುತ್ತಾರೆ. "ಪರಿಶೋಧನೆ" ಪದದಲ್ಲಿ 'ಹುಡುಕುವುದು' ಎಂದು ಅರ್ಥವಿದೆ. "ಪರಿಶೋಧನೆಯಲ್ಲಿ" ಪರಿ+ಶೋಧನೆ ಎನ್ನುವ ಎರಡು

ಭಾಗಗಳಾಗಿ ಪದವಿದೆ. ಅದರಲ್ಲಿ ಮೊದಲಿರುವ 'ಪರಿ' ಎನ್ನುವ ಪದವನ್ನು ಗಾಳಿಗೆ ಬಿಟ್ಟು ಕೇವಲ **'ಶೋಧನೆ'** ಎನ್ನುವ ಪದಕ್ಕೆ ಮಾತ್ರ ಅರ್ಥ ಹೇಳುತ್ತಿದ್ದಾರೆ. **'ಪರಿಶೋಧನೆ'** ಎನ್ನುವ ಪೂರ್ತಿ ಪದಕ್ಕೆ ಯಾರೂ ಸರಿಯಾದ ಅರ್ಥವನ್ನು ಹೇಳಲಿಲ್ಲ. 'ಪರಿಶೋಧನೆ' ಎನ್ನುವ ಪೂರ್ತಿ ಪದಕ್ಕೆ ಅರ್ಥಬೇಕೆಂದರೆ ಮೊದಲು **"ಪರಿಪಾಲನೆ"** ಎನ್ನುವ ಪದದ ಅರ್ಥ ತಿಳಿದಿರಬೇಕು. ಆದರೆ ಅಲ್ಲಿಯೂ ಸಹ "ಪಾಲನೆ" ಎಂಬ ಪದಕ್ಕೆ ಅರ್ಥವನ್ನು ಮಾತ್ರ ಹೇಳುತ್ತಿದ್ದಾರೆ ಹೊರತು "ಪರಿ" ಎಂಬ ಶಬ್ದಕ್ಕೆ ಮಾತ್ರ ಅರ್ಥವನ್ನು ಯಾರೂ ಹೇಳಲಿಲ್ಲ. **"ಪರಿಶೋಧನೆ"** ಎನ್ನುವ ಪದಕ್ಕಾಗಲಿ, **"ಪರಿಪಾಲನೆ"** ಎನ್ನುವ ಪದಕ್ಕಾಗಲಿ, **"ಪರಿಶೀಲನೆ"** ಎನ್ನುವ ಪದಕ್ಕಾಗಲಿ ಪೂರ್ತಿ ಅರ್ಥಹೇಳದೆ ಅವುಗಳಲ್ಲಿ ಒಂದು ಭಾಗವಾಗಿರುವ 'ಶೋಧನೆ', 'ಪಾಲನೆ,' 'ಶೀಲನೆ' ಎನ್ನುವ ಪದಗಳಿಗೆ ಮಾತ್ರ ಅರ್ಥವನ್ನು ಹೇಳಿಕೊಳ್ಳುತ್ತಿದ್ದಾರೆ. "ಪರಿ" ಎನ್ನುವ ಪದವನ್ನು ಬಿಟ್ಟಿದ್ದಾರೆ. ಮೊದಲು **"ಪರಿಪಾಲನೆ'** ಎನ್ನುವ ಪದಕ್ಕೆ ಅರ್ಥವನ್ನು ತಿಳಿದುಕೊಂಡರೆ ಉಳಿದಿರುವ ಎರಡು ಪದಗಳಿಗೆ ಅರ್ಥವು ತಿಳಿಯುತ್ತದೆ.

**ಪ್ರಶ್ನೆ :– ನೀವು ಹೇಳಬೇಕಾದ ವಿಷಯವನ್ನು ಬಿಟ್ಟು ಬೇರೆ ವಿಷಯದೊಳಗೆ ಹೋಗಿದ್ದೀರಾ. 'ಗಿಡ ಮೊದಲಾ, ಬೀಜ ಮೊದಲಾ' ಎನ್ನುವುದು ಮುಖ್ಯವಾದ ಸಮಾಚಾರ. ಆದರೆ ನೀವು ಆ ವಿಷಯವನ್ನು ಬಿಟ್ಟು ಸಂಬಂಧವಿಲ್ಲದ ವಿಷಯವನ್ನು ಪರದೆ ಮೇಲೆ ತಂದಿದ್ದೀರಾ.**

**ಉತ್ತರ :–** ಮುಖ್ಯವಾದ ವಿಷಯಕ್ಕಾಗಿ ಈ ವಿಷಯವನ್ನು ಹೇಳುತ್ತಿದ್ದೇನೆ. ಗಿಡ ಮೊದಲಾ, ಬೀಜ ಮೊದಲಾ? ಎನ್ನುವುದಕ್ಕೆ ಉತ್ತರ ಸಿಕ್ಕಿದರೂ ಅದನ್ನು ಗ್ರಹಿಸಿಕೊಳ್ಳುವ ಸ್ಥಿತಿಯಲ್ಲಿ ಮನುಷ್ಯನಿಲ್ಲ. ಉತ್ತರ ಸಿಗಲಿಲ್ಲ ಎನ್ನುವ ಭ್ರಮೆಯಲ್ಲಿದ್ದಾರೆ. ಆದ್ದರಿಂದ ಸಿಕ್ಕಿದ ಉತ್ತರವನ್ನು ಉತ್ತರವಾಗಿ ಅರ್ಥಮಾಡಿಕೊಳ್ಳಲು ಮೊದಲು ಎಷ್ಟೋ ಸಮಾಚಾರವನ್ನು ತಿಳಿದಿರಬೇಕು. ಆದ್ದರಿಂದ ಈಗ **'ಪರಿಪಾಲನೆ"** ಶಬ್ದಕ್ಕೆ ವಿವರವನ್ನು ತಿಳಿದುಕೊಳ್ಳೋಣ. ರಾಜು, ರಾಜ್ಯದ ವಿಷಯವನ್ನು ನೋಡಿದರೆ ರಾಜ್ಯದಲ್ಲಿ ರಾಜು ಅಧಿಕಾರವನ್ನು ಸಾಗಿಸುವುದಕ್ಕೆ

ಎಷ್ಟೋ ಪಾಲಕರು ಅಗತ್ಯ. ರಾಜನು ಒಬ್ಬನಾದರೆ ರಾಜನ ಕೆಳಗೆ ಪಾಲಕರು ಅನೇಕ ಮಂದಿ ಇರುತ್ತಾರೆ. ಆದರೆ ರಾಜ ಕಾಣಿಸಿಕೊಳ್ಳುವವನೆ, ಪಾಲಕರು ಕಾಣಿಸಿಕೊಳ್ಳುವವರೆ. ಕಾಣಿಸಿಕೊಳ್ಳುವ ರಾಜ ಕೆಳಗೆ ಕಾಣಿಸುವ ಪಾಲಕರು ಮಂತ್ರಿ, ಸೇನಾಧಿಪತಿ ಮೊದಲಗೊಂಡು ಸಾಧಾರಣ ಭಟರವರೆಗೂ, ಎಷ್ಟೋಜನ ಪಾಲಕರು ಇರುವುದು ಸಹಜವೆ! ರಾಜನೊಂದರ ರಾಜ್ಯ ಚಿಕ್ಕದಾದರೇ ಪಾಲಕರು ಕಡಿಮೆಯಾಗಿರುತ್ತಾರೆ. ರಾಜನೊಂದರ ರಾಜ್ಯವು ದೊಡ್ಡದಾದರೆ ರಾಜನ ಮಾತನ್ನು ಜಾರಿ ಮಾಡುವುದಕ್ಕೆ ಬಹಳಮಂದಿ ಪಾಲಕರು ಅಗತ್ಯವಾಗುತ್ತಾರೆ.

ಈದಿನ ಭೂಮಿಮೇಲೆ 194 + 1 = ಒಟ್ಟಾರೆ 195 ದೇಶಗಳು ಇವೆ. 195 ದೇಶಗಳಿಗೆ ರಾಜರು ಇದ್ದಾರೆ, ಪಾಲಕರು ಇದ್ದಾರೆ. ಆದರೇ ವಿಶ್ವಕ್ಕೆಲ್ಲ ಒಬ್ಬ **ಚಕ್ರವರ್ತಿ** ಇದ್ದಾನೆ. ಆತನೇ ಕಾಣಿಸದ **ದೇವರು**. ದೇವರ ಅಧಿಕಾರ ವಿಶ್ವದಲ್ಲಿನ ಪ್ರತಿ ಅಣುವಿನವರೆಗು ವ್ಯಾಪಿಸಿದೆ. ದೇವರು ಒಬ್ಬನೇ, ಆತನು ಏನು ಮಾಡುವವನಲ್ಲ. ಆದರೆ ಆತನ ಅಧಿಕಾರವನ್ನು ವಿಸ್ತರಿಸಿ ಪಾಲಿಸುವ ಪಾಲಕರು ಕೋಟಿ ಸಂಖ್ಯೆಯಲ್ಲಿ ಇದ್ದಾರೆ. ಕಾಣಿಸುವ ರಾಜನ ಕೆಳಗೆ ಕೆಲಸಮಾಡುವವರನ್ನು ಪಾಲಕರೆಂದರೇ, ಕಾಣಿಸದ ಚಕ್ರವರ್ತಿಯಾದ ದೇವರ ಕೆಳಗೆ ಕೆಲಸಮಾಡುವವರನ್ನು **"ಪರಿಪಾಲಕರು"** ಎಂದು ಕರೆಯುತ್ತಾರೆ. ದೇವರ ವಿಶ್ವ ಸಾಮ್ರಾಜ್ಯದಲ್ಲಿ ದೇವರು ಅಧಿಪತಿಯಾಗಿದ್ದು ಆತನ ಕೆಳಗೆ ಕೆಲಸ ಮಾಡುವ ಪಾಲಕರು ಕೆಲವು ಕೋಟಿ ಸಂಖ್ಯೆಯಲ್ಲಿ ಇದ್ದಾರೆ. ದೇವರನ್ನು ಕುರಿತು ಈತನೇ ದೇವರೆಂದು, ದೇವರು ಹೀಗೇ ಇರುತ್ತಾನೆಂದು ಹೇಗೆ ಹೇಳಲಾರೆವೊ, ಹಾಗೆಯೇ ವಿಶ್ವದಲ್ಲಿ ದೇವರ ರಾಜ್ಯಕ್ಕಾಗಿ ಕೆಲಸಮಾಡುವ ಪರಿಪಾಲಕರು ಇಷ್ಟುಜನ ಇದ್ದಾರೆಂದು ಹೇಳಲು ಅವಕಾಶವಿಲ್ಲ. ದೇವರ ಪರಿಪಾಲಕರಿದ್ದಾರೆನ್ನುವ ವಿಷಯವೇ ಬಹಳ ಜನರಿಗೆ ತಿಳಿದಿಲ್ಲ.

ದೇವರ ಪಾಲಕರು ಐದು ವಿಧಗಳಾಗಿ ವಿಭಜನೆ ಆಗಿದ್ದಾರೆ. **1) ಮಹಾಭೂತಗಳು 2) ಭೂತಗಳು 3) ಉಪಭೂತಗಳು 4) ಗ್ರಹಗಳು 5) ಉಪಗ್ರಹಗಳು**. 'ಭೂತ' ಎಂದರೆ ಜೀವ ಇರುವುದೆಂದು ಅರ್ಥ. 'ಗ್ರಹ'

ಎಂದರೆ ಗ್ರಹಿಸುವುದು ಎಂದು ಅರ್ಥ. ಅರ್ಥಗಳು ಬೇರೆಯಾದರೂ ಎರಡು ವಿಧಗಳಾಗಿರುವವು ಜೀವ ಇರುವವೆಂದು ತಿಳಿಯಬೇಕು. ದೇವರ ಪಾಲಕರಾಗಿ ಹೇಳಲ್ಪಡುತ್ತಿರುವ ಐದು ವಿಧಗಳ ಜೀವಿಗಳು (ಭೂತಗಳು ಮತ್ತು ಗ್ರಹಗಳು) ಆಕಾಶದಲ್ಲಿಯೇ ಇರುತ್ತವೆ. ಭೂಮಿಮೇಲೆ ಅವಶ್ಯಕತೆಯನ್ನು ಅನುಸರಿಸಿ ಬಂದುಹೋಗುತ್ತಿರುತ್ತಾರೆ.

**ಪ್ರಶ್ನೆ :– ಭೂಮಿಮೇಲೆ ಯಾವ ದೇಶದಲ್ಲಿ ಆದರೂ, ಯಾರು ದೇವರ ಪಾಲಕರಿದ್ದಾರೆಂದಾಗಲಿ, ಅವರನ್ನು ಇಂತಹ ಹೆಸರುಗಳಿಂದ ಕರೆಯುತ್ತಿದ್ದೇವೆಂದಾಗಲಿ ಹೇಳಲಿಲ್ಲ. ಹಾಗೆ ಹೇಳಿದವರಲ್ಲಿ ನೀವೇ ಮೊದಲನೆಯವರು. ಮುಂದೆ, ಹಿಂದೆ ಯಾವ ಆಧಾರವಿಲ್ಲದ ಮಾತನ್ನು, ಇಲ್ಲಿಯವರೆಗು ಯಾರೂ ಹೇಳದ ಮಾತನ್ನು ನಾವು ಹೇಗೆ ನಂಬಬೇಕು? ನಾವು ನಂಬುವುದಕ್ಕೆ ಏನಾದರೂ ಆಧಾರವಿದ್ದರೆ ಹೇಳಿರಿ.**

**ಉತ್ತರ :–** ಭೂಮಿಮೇಲೆ ಯಾರೂ ಹೇಳದ ಜ್ಞಾನವನ್ನು ಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ. ಯಾರೂ ಹೇಳದ ಜ್ಞಾನ, ಯಾರಿಗೂ ತಿಳಿಯದ ರಹಸ್ಯವೆಂದು, ಯಾರಿಗೂ ತಿಳಿಯದ ವಿದ್ಯೆ ಹೇಳುತ್ತಿದ್ದೇನೆಂದು ಕೃಷ್ಣನು ಹೇಳಿದಾಗ ನಿನ್ನಂತೆ ಅರ್ಜುನನು ಇದಕ್ಕೆ ಆಧಾರವೇನು? ಎಂದು ಕೇಳಲಿಲ್ಲ. ಹಾಗೆ ಕೇಳಿದರೂ ಯಾರಿಗು ತಿಳಿಯದ ರಹಸ್ಯ ನಿಗೂಢವಾಗಿಯೇ ಇರುತ್ತದೆ ಹೊರತು ಆಧಾರ ಸಹಿತವಾಗಿ ಇರುವುದಿಲ್ಲ. ಒಂದುಸಲ ನಡೆದ ನಂತರ ಅದು ಇತರರಿಗೆ ಆಧಾರವಾಗುತ್ತದೆ. ಹಾಗೆಯೇ ಒಂದು ಸಲ ತಿಳಿದ ನಂತರ ಅದನ್ನು ಆಧಾರವಾಗಿ ಹೇಳಬಹುದು. ದೇವರ ಜ್ಞಾನ ದೇವರಿಗೆ ಹೊರತು ಇತರೆ ಮನುಷ್ಯರಿಗೆ ಯಾರಿಗೂ ತಿಳಿದಿಲ್ಲವೆಂದು ದೇವರೇ ಹೇಳಿದಾಗ, ದೇವರು ತನ್ನ ಜ್ಞಾನಕ್ಕೆ ಆಧಾರವನ್ನು ಹೇಗೆ ತೋರಿಸುತ್ತಾನೆ? **"ದೇವರ ಜ್ಞಾನ ದೇವರಿಗೆ ಹೊರತು ಯಾರಿಗೂ ತಿಳಿದಿಲ್ಲ"** ಆದ್ದರಿಂದ ದೇವರ ಜ್ಞಾನಕ್ಕೆ ವಾಸ್ತವವಾಗಿ ದೇವರೇ ಆಧಾರ. ದೇವರು ಯಾರಿಗೂ ತಿಳಿಯುವುದಿಲ್ಲ, ಹಾಗೆಯೇ ದೇವರ ಜ್ಞಾನ ದೇವರಿಗೆ ಹೊರತು ಯಾರಿಗೂ ತಿಳಿದಿಲ್ಲ. ಹಾಗಿರುವಾಗ ಮನುಷ್ಯನಿಗೆ ತಿಳಿಯುವ

ಯಾವ ಆಧಾರವೂ ಇರುವುದಿಲ್ಲ. ಹಾಗೆಂದು ಆಧಾರ ಇಲ್ಲದಷ್ಟುಮಾತ್ರಕ್ಕೆ ದೇವರಾಗಲಿ, ದೇವರ ಜ್ಞಾನವಾಗಲಿ ಅಸತ್ಯವಲ್ಲ! ಹಾಗೆಯೇ ಈಗ ನಾವು ಹೇಳಿದ **ಮಹಾಭೂತ, ಭೂತ, ಉಪಭೂತ, ಗ್ರಹ, ಉಪಗ್ರಹಗಳನ್ನು** ಯಾರೂ ಹೇಳದಿದ್ದರೂ ಅವು ಮೊದಲನೆ ಸಲ ತಿಳಿಯುವುದರಿಂದ ಅವುಗಳಿಗೆ ಆಧಾರ ಇಲ್ಲವೆಂದೇ ಹೇಳಬಹುದು. ಆದರೂ ಅವು ಅಸತ್ಯಗಳು ಅಲ್ಲ.

ಈ ಐದು ವಿಧವಾದವರು ಸೃಷ್ಟಿ ಆದಿಯಿಂದ ಇರುವುದರಿಂದ, ಅವರು ಈದಿನ ಹೊಸದಾಗಿ ಕೇಳಿಸಿದರೂ ಅವರ ಇರುವಿಕೆ ಹಳೆಯದೇ ಎಂದು ಹೇಳಬಹುದು. ಹಳೆಯದಕ್ಕೆ ಎಲ್ಲಿಯೋ ಒಂದುಕಡೆ ಆಧಾರ ಲಭಿಸುತ್ತದೆ. ಅದರಪ್ರಕಾರ ನೋಡಿದರೆ 'ಕಲ್ಪನಾಚಾವ್ಲಾ' ಎನ್ನುವ ಆಕೆ ಅಮೇರಿಕಾದ ನಾಸಾದಲ್ಲಿ (ಅಂತರಿಕ್ಷ ಪರಿಶೋಧನಾ ಕೇಂದ್ರದಲ್ಲಿ) ಕೆಲಸ ಮಾಡುವ ಮಹಿಳೆ. ಅಂತರಿಕ್ಷ ಪರಿಶೋಧನೆಗೆ ಆಕಾಶದೊಳಗೆ ಹೋಗಿ ಹಿಂತಿರುಗಿ ಬರುವ ಪ್ರಯಾಣದಲ್ಲಿ ಉಪಗ್ರಹ ಆಕೆ ಪ್ರಯಾಣಿಸುವ ರಾಕೆಟ್‌ಗೆ ಢೀಗೊಂಡು ಆಕೆ, ಆಕೆಯೊಂದಿಗೆ ಇರುವ ಉಳಿದ ಆರು ಜನ ಮರಣಿಸುವುದು ನಡೆದಿದೆ. ಈ ವಿಷಯವೆಲ್ಲವೂ ನಾವು ಬರೆದ **"ಪುನರ್ಜನ್ಮ ರಹಸ್ಯ"** ಎನ್ನುವ ಗ್ರಂಥದಲ್ಲಿ ಇದೆ. ಅಲ್ಲಿ ಬರೆದ ಸಮಾಚಾರ ಕೆಳಗೆ ತಿಳಿಸುತ್ತಿದ್ದೇವೆ ನೋಡಿರಿ.

ಮೊಟ್ಟಮೊದಲು ಭಾರತೀಯ ಅಂತರಿಕ್ಷ ಯಾತ್ರಿಕಳು 'ಕಲ್ಪನಾ ಚಾವ್ಲಾ' ಹೆಸರು ಕೇಳದವರು ಯಾರೂ ಇರುವುದಿಲ್ಲ. ಭಾರತೀಯ ಮಹಿಳಾ ಸಾಹಸಕ್ಕೂ, ಮೇಧಸ್ಸಿಗೂ ಚಿಹ್ನೆಯಾಗಿ ನಿಂತಿರುವ ಪಂಜಾಬ್ ರಾಷ್ಟ್ರಕ್ಕೆ ಸೇರಿದ ಕಲ್ಪನಾ ಚಾವ್ಲಾ, ಅಮೇರಿಕಾ ದೇಶಕ್ಕೆ ಸೇರಿದ ಅಂತರಿಕ್ಷ ಪರಿಶೋಧನಾ ಸಂಸ್ಥೆ NASA (ನಾಸಾ) ದಲ್ಲಿ ಕೆಲಸ ಮಾಡುತ್ತಿದ್ದಳು. ಅಂತರಿಕ್ಷದೊಳಗೆ ಪ್ರಯೋಗಿಸಿದ ಕೊಲಂಬಿಯಾ ಸ್ಪೇಸ್‌ಷಿಪ್‌ನಲ್ಲಿ ಇತರೆ ಪಾಶ್ಚಾತ್ಯ ಅಂತರಿಕ್ಷ ಯಾತ್ರಿಕರೊಂದಿಗೆ ಅಂತರಿಕ್ಷ ಯಾತ್ರೆಯಲ್ಲಿ ಪರಿಶೋಧಕಿಯಾಗಿ ಪಾಲ್ಗೊಂಡು ಅಂತರಿಕ್ಷದೊಳಗೆ ಪ್ರಯಾಣಿಸಿದ್ದಾಳೆ. ಆಕಾಶದಲ್ಲಿಯೇ ಕೆಲವುಕಾಲ ಕಳೆದು ಪರಿಶೋಧನೆ ಸಾಗಿಸಿದ ನಂತರ ಕೊಲಂಬಿಯಾ ಸ್ಪೇಸ್‌ಷಿಪ್ ಭೂಮಿಗೆ ಪುನಃ ಪ್ರಯಾಣ ಮೊದಲು

ಮಾಡಿದೆ. 2003 ನೇ ವರ್ಷ ಫೆಬ್ರವರಿ 1ನೇ ತಾರೀಖು ಇನ್ನು ಹದಿನಾರು (16) ನಿಮಿಷಗಳಲ್ಲಿ ಭೂಮಿಮೇಲೆ ಇಳಿಯುತ್ತಿರುವ ಕೊಲಂಬಿಯಾ ಸ್ಪೇಸ್‌ಷಿಪ್ ದುರದೃಷ್ಟವಶಾತ್ತು ಊಹಿಸದ ಪರಿಣಾಮಗಳಿಂದ ಆಕಾಶದಲ್ಲಿಯೇ ಭೂಮಿ ವಾತಾವರಣದೊಳಗೆ ಪ್ರವೇಶಿಸುತ್ತಲೇ ಸಿಡಿದು ಹೋಗಿದೆ. ಅದರೊಂದಿಗೆ ಅದರಲ್ಲಿ ಪ್ರಯಾಣಿಸುತ್ತಿರುವ ಅಂತರಿಕ್ಷ ಯಾತ್ರಿಕರೆಲ್ಲರೂ ಚಿಕ್ಕ ಚಿಕ್ಕ ತುಂಡುಗಳಾಗಿ ಮರಣಿಸಿದ್ದಾರೆ. ಭಾರತೀಯ ವ್ಯೋಮಗಾಮಿ ಕಲ್ಪನಾಚಾವ್ಲಾ ಸಹ ಆ ಘೋರ ಅಪಘಾತದಲ್ಲಿ ಪ್ರಾಣಗಳು ಕಳೆದುಕೊಳ್ಳುವುದು ನಡೆದಿದೆ. ಆದರೆ ಆಕೆ ಕೆಲವು ದಿನಗಳಿಗೆ ಪುನಃ ಭೂಮಿ ಮೇಲೆ ಹುಟ್ಟುವುದು ನಡೆದಿದೆ.

ಕಲ್ಪನಾಚಾವ್ಲಾ ಪುನಃ ಹುಟ್ಟಿದ ಸಮಾಚಾರವನ್ನು (ಎಸ್. ಬಿ.ಯನ್ 7) ಛಾನಲ್ ಮತ್ತು ಇಂಡಿಯಾಟುಡೇ ಪತ್ರಿಕೆ, ಕಲ್ಪನಾಚಾವ್ಲಾ ಪುನಃ ಜನ್ಮಿಸಿದ ಘಟನೆಯನ್ನು ಪ್ರಸಾರ ಮಾಡಿ ಪ್ರಪಂಚಕ್ಕೆ ತಿಳಿಸುವುದು ನಡೆದಿದೆ. ಆ ವಿವರಗಳನ್ನು ನೋಡಿದರೆ, ಉತ್ತರ ಭಾರತದೇಶದಲ್ಲಿ ಉತ್ತರ ಪ್ರದೇಶ್ ರಾಷ್ಟ್ರದಲ್ಲಿರುವ ಬುಲ್ಲಂದ್ ಷಹರ್ ಎಂಬ ಗ್ರಾಮದಲ್ಲಿ ರಾಜ್‌ಕುಮಾರ್ ಎನ್ನುವ ಸಾಧಾರಣ ವ್ಯವಸಾಯ ಕೂಲಿಯಾಗಿ ಕೆಲಸ ಮಾಡುತ್ತಿರುವ ವ್ಯಕ್ತಿ ಕುಟುಂಬದಲ್ಲಿ ಆತನಿಗೆ ಮಗಳಾಗಿ ಜನ್ಮಿಸಿದ್ದಾಳೆ. 2003ನೇ ವರ್ಷ ಮಾರ್ಚ್ 23ನೇ ತಾರೀಖು ಉಪಾಸನ ಎನ್ನುವ ಹೆಸರಿನಿಂದ ಆ ಕುಟುಂಬದಲ್ಲಿ ಕಲ್ಪನಾಚಾವ್ಲಾ ಜನ್ಮಿಸುವುದು ನಡೆದಿದೆ. ಉಪಾಸನ (ಕಲ್ಪನಾಚಾವ್ಲಾ)ಗೆ ನಾಲ್ಕು ವರ್ಷಗಳ ವಯಸ್ಸಿನಲ್ಲಿ ಮಾತುಗಳು ಬಂದಿವೆ. ಮಾತನಾಡುವುದನ್ನು ಪ್ರಾರಂಭಿಸಿದ ಉಪಾಸನ, ತಾನು ಗತಜನ್ಮದಲ್ಲಿ ಕಲ್ಪನಾಚಾವ್ಲಾ ಎನ್ನುವ ಹೆಸರಿರುವ ಅಂತರಿಕ್ಷ ಪರಿಶೋಧಕಿಯೆಂದು, ತನ್ನ ತಂದೆ ಹೆಸರು ಬನಾರ್ಸಿದಾಸ್ ಎಂದೂ, ನಾಲ್ಕು ವರ್ಷಗಳ ಕೆಳಗೆ ತಾನು ತನ್ನಜೊತೆ ಅಂತರಿಕ್ಷ ಪರಿಶೋಧಕರೊಂದಿಗೆ ಸೇರಿ ಒಂದ ವಿಮಾನದಲ್ಲಿ ಆಕಾಶದಿಂದ ಇಳಿದುಬರುತ್ತಿರುವಾಗ, ತಮ್ಮ ವಿಮಾನಕ್ಕೆ ಅಪಘಾತ ನಡೆದು ತಾವೆಲ್ಲರೂ ಮರಣಿಸಿದ್ದೇವೆಂದು ಹೇಳುವುದು ನಡೆದಿದೆ.

ಹಿಂದಿಜನ್ಮ ವಿವರಗಳನ್ನು ಮಣಿಪೋಣಿಸಿದಂತೆ ಹೇಳುತ್ತಿರುವ ಉಪಾಸನ (ಕಲ್ಪನಾ ಚಾವ್ಲಾ) ವೊಂದರ ಹೆಸರು ಉತ್ತರಪ್ರದೇಶ್ ರಾಷ್ಟ್ರವೆಲ್ಲಾ ಕ್ರಮವಾಗಿ ತಿಳಿದುಹೋಗಿದೆ. ಪ್ರಸ್ತುತ ಉತ್ತರಪ್ರದೇಶದಲ್ಲಿನ ಎತ್ವಾ ಜಿಲ್ಲೆಯಲ್ಲಿನ "ಪತಾ" ಎನ್ನುವ ಗ್ರಾಮದಲ್ಲಿ ಕೂಲಿ ಕೆಲಸ ಮಾಡಿಕೊಳ್ಳುತ್ತಿರುವ ತಂದೆ ರಾಜಕುಮಾರನೊಂದಿಗೆ ಜೀವಿಸುತ್ತಿರುವ ಉಪಾಸನ ತನ್ನನ್ನು ಇಂಟರ್ವ್ಯೂ ಮಾಡುವುದಕ್ಕೆ ಬಂದಿರುವ ಪ್ರಪಂಚಮಟ್ಟದ ಮೀಡಿಯಾ ಪ್ರತಿನಿಧಿಗಳೊಂದಿಗೆ ಮಾತನಾಡುತ್ತಾ ನಾವು  ಭೂಮಿ ಮೇಲೆಗೆ ಹಿಂತಿರುಗಿ ಬರುತ್ತಿರುವ ಅಂತರಿಕ್ಷನೌಕೆಗೆ ಆಕಾಶದಲ್ಲಿ ಸಂಚಾರ ಮಾಡುತ್ತಿರುವ ಒಂದು ದೊಡ್ಡ ಮಂಜಿನ ಗೋಳವು ಡಿಕ್ಕಿ ಹೊಡೆದಿದೆಯೆಂದು, ಆದರಿಂದ ತಮ್ಮ ಅಂತರಿಕ್ಷನೌಕೆ ಸಿಡಿದುಹೋಗಿ ಅದರಲ್ಲಿನ ತಾವೆಲ್ಲರೂ ಮರಣಿಸಿದ್ದೇವೆಂದು ಹೇಳಿದಳು. 2003ನೇ ವರ್ಷ ಫೆಬ್ರವರಿ 1ನೇ ತಾರೀಖು  ನಾಸಾಕೇಂದ್ರದವರು ಅಂತರಿಕ್ಷ ನೌಕೆಗೆ ಹೊರಗಡೆ ಸುತ್ತಾ ಅಳವಡಿಸಿರುವ ಪ್ಲೇಟುಗಳು ಬಿದ್ದುಹೋಗಿರುವುದರಿಂದ ಆ ನೌಕೆ ಭೂಮಿ ವಾತಾವರಣದೊಳಗೆ ಬರುತ್ತಲೇ ವಾತಾವರಣ ಒತ್ತಡದ ಬಿಸಿಗೆ  ಸಿಡಿದುಹೋಗಿದೆಯೆಂದು ಹೇಳಿದ್ದಾರೆ. ನಾಸಾದವರು ಅಂದುಕೊಂಡ ಹಾಗೆ ಅಲ್ಲಿ ನಡೆಯಲಿಲ್ಲವೆಂದು, ಆಕಾಶದಲ್ಲಿ ಭೂಮಿಗೆ 70 ಕೀಲೋಮೀಟರ್‌ಗಳ ದೂರದಲ್ಲಿಯೇ ಮುಂಜುಗಡ್ಡೆಗೋಳಕ್ಕೆ ಅಂತರಿಕ್ಷನೌಕೆ ಗುದ್ದಿಕೊಳ್ಳುವುದರಿಂದ ಪ್ರಮಾದ ನಡೆದಿದೆಯೆಂದು ಪ್ರತ್ಯಕ್ಷ ಸಾಕ್ಷಿಯಾದ ಕಲ್ಪನಾಚಾವ್ಲಾ ಹೇಳಿರುವುದರಿಂದ ತಿಳಿದುಹೋಗಿದೆ.

ಕಲ್ಪನಾಚಾವ್ಲಾ ಪ್ರಯಾಣಿಸುವ ಅಂತರಿಕ್ಷಾ ನೌಕೆ ಭೂಮಿಗೆ 70 ಕೀಲೋಮೀಟರಗಳ ದೂರದಲ್ಲಿಯೇ ಮುಂಜುಗಡ್ಡೆಗೋಳಕ್ಕೆ ಡಿಕ್ಕಿ ಹೊಡೆದು ಕೊಂಡಿದ್ದು ನಡೆದಿದೆಯೆಂದು ಕೇಳಿದ್ದೇವೆ. ಅಲ್ಲಿಯವರೆಗೂ ಯಾರಿಗೂ ತಿಳಿಯದ ಮಂಜುಗೋಳವೇನು? ಎಂದು ಯಾರಾದರೂ ಯೋಚನೆ ಮಾಡಿದ್ದೀರಾ? ಮಂಜು ಗೋಳವನ್ನು ಕುರಿತು ಯಾವ ಶಾಸ್ತ್ರಜ್ಞನಾದರೂ, ಯಾವ ಪರಿಶೋಧಕನಾಗಲಿ ಹೇಳಿದ್ದಾರಾ? ಹೇಳಲಿಲ್ಲ. ಮುಂಜುಗೋಳವೊಂದರ

ರಹಸ್ಯವನ್ನು ನೋಡಿದರೆ ಅದೊಂದು **ಉಪಗ್ರಹ**. ಅದರ ಹೆಸರು ಯಾರಿಗೂ ತಿಳಿದಿಲ್ಲ. ಕೆಲವು ಸಮಯಗಳಲ್ಲಿ **ಸ್ಥೂಲವಾಗಿ** ಕೆಲವು ಸಮಯಗಳಲ್ಲಿ **ಸೂಕ್ಷ್ಮವಾಗಿ** ಇರುವ ಆ ಗ್ರಹವು ಅದೇ ಕೆಲಸದ ಮೇಲೆ ಸ್ಥೂಲವಾಗಿ ರಾಕೆಟ್‌ಗೆ ಎದುರಾಗಿ ಬಂದಿದೆ. ಊಹಿಸದ ಪರಿಣಾಮದಿಂದ ನಡೆದ ದುರ್ಘಟನೆಯಲ್ಲಿ ಅಂತರಿಕ್ಷ ಯಾತ್ರಿಕರು ಮರಣಿಸುವುದು ನಡೆದಿದೆ. ಆದರೆ ಮರಣಿದ ಕಲ್ಪನಾಚಾವ್ಲಾ ಪುನಃ ಜನ್ಮಿಸಿ ಆಕೆ ಹೇಳಿದಾಗ ಆ ವಿಷಯ ಎಲ್ಲರಿಗೂ ತಿಳಿದಿದೆ. ಉಪಗ್ರಹಕ್ಕೆ ಆಧಾರವಾಗಿ ಮಂಜುಗೋಳವು ಕಾಣಿಸಿದರೂ, ಅದು ತಿಳಿಯದ ರಹಸ್ಯಕ್ಕೆ ಆಧಾರವೆಂದು ಯಾರೂ ಅಂದುಕೊಳ್ಳುತ್ತಿಲ್ಲ. ಸತ್ತು ಬದುಕಿದ ಮನುಷ್ಯ ಪ್ರತ್ಯಕ್ಷ ಸಾಕ್ಷಿಯಾಗಿ ಹೇಳಿದರೂ ಉಪಗ್ರಹವೊಂದರ ಇರುವಿಕೆಯನ್ನು ಕುರಿತು ತಿಳಿಯದವರು ಕುರುಡರಿಗೆ ಸಮಾನ ಅಲ್ಲವೆ!

ಬುದ್ಧಿ ವಿಕಾಸ ಇರುವವರು ಭೂತಗಳ, ಗ್ರಹಗಳನ್ನು ಕುರಿತು ಆಧಾರಗಳು ಭೂಮಿಮೇಲೆ ಎಷ್ಟೋ ಇವೆ. ಆದರೂ ಮನುಷ್ಯರು ಅವುಗಳನ್ನು ಗ್ರಹಿಸಿಕೊಳ್ಳುತ್ತಿಲ್ಲ. ನಾವು ಹೇಳುವ ಗ್ರಹಗಳು, ಭೂತಗಳ ಹೆಸರುಗಳು ಹೊಸದಾದರೂ ಅವುಗಳ ಕೆಲಸಗಳು ಭೂಮಿಮೇಲೆ ಎಷ್ಟೊ ನಡೆಯುತ್ತಿವೆ. ಆಲೋಚಿಸಿ ನೋಡಿದರೆ ಅವುಗಳ ಕೆಲಸಗಳೇ ಅವುಗಳಿಗೆ ಆಧಾರವೆಂದು ಹೇಳಬಹುದು. ಆಕಾಶದಲ್ಲಿ ಸಂಚರಿಸುವ ಭೂತಗಳಲ್ಲಿ, ಉಪಭೂತಗಳಲ್ಲಿ ಎಷ್ಟೋ ಲೆಕ್ಕವಿಲ್ಲದಷ್ಟು ಜಾತಿಗಳಾಗಿ ವಿಭಜಿಸಲ್ಪಟ್ಟಿವೆ. ಅದರಲ್ಲಿ ಕೆಲವು ನೂರಾರು ಜಾತಿಗಳು ರೋಗಗಳಾಗಿವೆ. ಅದರಲ್ಲಿ ಕ್ಯಾನ್ಸರ್ ರೋಗ ಎಂದು ಹೆಸರಿರುವ ಭೂತಗಳು ಎಷ್ಟೋ ಲಕ್ಷಗಳಲ್ಲಿ ಇವೆ. ಮನುಷ್ಯರು ಮಾಡಿಕೊಂಡ ಪಾಪವನ್ನು ಅನುಸರಿಸಿ ಕ್ಯಾನ್ಸರ್ ರೋಗ ಅನುಭವಿಸಬೇಕಾದ ಪಾಪ ಇರುವವನನ್ನು ಹುಡುಕಿ ಕ್ಯಾನ್ಸರ್ ಭೂತವು ಹಿಡಿದುಕೊಳ್ಳುತ್ತದೆ. ಭೂತ ಎಂದರೇ ದೆವ್ವವಾ, ಪಿಶಾಚಿಯಾ ಎಂದು ಅಂದುಕೊಳ್ಳಬೇಡಿರಿ. ಜೀವವಿರುವ ಗ್ರಹವೆಂದು ತಿಳಿಯಬೇಕು. **"ರೋಗ ಒಂದು ಭೂತ"** ಎನ್ನುವ ಮಾತಿನ ಪ್ರಕಾರ ಕ್ಯಾನ್ಸರ್ ರೋಗ ಒಂದು ಭೂತವಾಗಿದ್ದು ಮನುಷ್ಯರನ್ನು ತನ್ನ ರೋಗದಿಂದ ಒಂದುಕಡೆ

ಪೀಡಿಸುತ್ತಿದ್ದರೂ ಮನುಷ್ಯರು ರೋಗಗಳನ್ನು ಭೂತಗಳಾಗಿ ಗುರುತಿಸಿಕೊಳ್ಳದ ಸ್ಥಿತಿಯಲ್ಲಿದ್ದು ಪ್ರತ್ಯೇಕಿಸಿ ಭೂತಗಳ, ಗ್ರಹಗಳನ್ನು ಕುರಿತು ಆಧಾರವಿದೆಯಾ! ಎಂದು ಕೇಳುವುದು ವಿಚಿತ್ರವಾಗಿದೆ. ಕಲ್ಪನಾಚಾವ್ಲಾ ಮರಣಕ್ಕೆ ಕಾರಣವಾದ ಮಂಜುಗೋಳ ಆಕೃತಿಯಿಂದಿರುವ ಉಪಗ್ರಹ ಆಧಾರ ಅಲ್ಲವೆ! ಹಾಗೆಯೇ ಇಂದು ಅನೇಕ ರೋಗಗಳ ರೂಪದಿಂದ ಅನೇಕ ಜಾತಿಗಳಾಗಿ ಭೂಮಿಮೇಲೆ ಸಂಚರಿಸುವ ಎಷ್ಟೋ ಭೂತಗಳು, ಉಪಭೂತಗಳು ಆಧಾರ ಅಲ್ಲವೆ! ಮನುಷ್ಯ ಮೂರು ವಿಧಗಳ ಭೂತಗಳ, ಎರಡು ವಿಧಗಳ ಗ್ರಹಗಳ ಪಾಲನೆಯಲ್ಲಿ ಅನೇಕ ಕಷ್ಟಸುಖಗಳು ಅನುಭವಿಸುತ್ತಿದ್ದಾನೆಂದು ಬಹಳಜನರಿಗೆ ತಿಳಿದೇ ಹೋಗಿದೆ.

**ಪ್ರಶ್ನೆ :– ಆಕಾಶದಲ್ಲಿ ಗೋಳವನ್ನು ಗ್ರಹ ಎನ್ನುವುದರಲ್ಲಿ ತಪ್ಪಿಲ್ಲ. ಆದರೂ ಮಂಜುಗೋಳವಿರುತ್ತದೆನ್ನುವ ವಿಷಯವನ್ನು ನಂಬಲು ಆಗುತ್ತಿಲ್ಲ. ಯಾರೋ, ಎಲ್ಲೋ ಮರಣಿಸಿದವರ ಹೆಸರು ಹೇಳಿ ಉಪಗ್ರಹವನ್ನು ಕುರಿತು ಆಧಾರ ಎನ್ನುತ್ತಿದ್ದಾರೆ. ಅದನ್ನು ಸ್ವಲ್ಪ ನಂಬಿದರೂ ಸ್ವಲ್ಪ ನಂಬುವುದಿಲ್ಲ ಎಂದೇ ಹೇಳುತ್ತೇವೆ. ಅಷ್ಟೇಅಲ್ಲದೆ ರೋಗಗಳನ್ನು ಜೀವವಿರುವ ಭೂತಗಳೆಂದು ಇಲ್ಲಿಯವರೆಗು ಭೂಮಿಮೇಲೆ ಯಾರೂ ಹೇಳಲಿಲ್ಲ. ಹಾಗಿರುವಾಗ ನಿಮ್ಮ ಮಾತನ್ನು ಹೇಗೆ ನಂಬಬೇಕು? ಕ್ಯಾನ್ಸರ್ ರೋಗ ಎಲ್ಲರಿಗೂ ತಿಳಿದಿರುವುದೇ. ಅದು ಕ್ಯಾನ್ಸರ್ ಕಣಗಳಿಂದ ಕೂಡಿಕೊಂಡ ರೋಗ. ನಮ್ಮ ಶಾಸ್ತ್ರಜ್ಞರು ಕಂಡುಹಿಡಿದ ಚಿಕಿತ್ಸೆಗಳಲ್ಲಿ ರೇಡಿಯೋ ಥೆರಪೀ ಎನ್ನುವುದು ಮುಖ್ಯವಾದುದು. ರೇಡಿಯಂ ಕಿರಣಗಳ ಮುಖಾಂತರ ಕ್ಯಾನ್ಸರ್ ಕಣಗಳನ್ನು ಸುಟ್ಟುಹಾಕುವುದು ವೈದ್ಯವಾಗಿ ಹೇಳುತ್ತಿರುವಾಗ, ನಾಗರಿಕತೆ ಎಷ್ಟೋ ಅಭಿವೃದ್ಧಿಯಾದ ಈ ಕಾಲದಲ್ಲಿ ದೆವ್ವಗಳು, ಭೂತಗಳು ಎಂದು ರಾತಿಯುಗದ ಮಾತುಗಳು ಹೇಳಿ ನಂಬಿಸಬೇಕೆಂದರೇ ಬಹಳ ದೊಡ್ಡ ತಪ್ಪು. ಎಷ್ಟೋ ವಿಜ್ಞಾನ ಬೆಳೆದ ಈ ಕಾಲದಲ್ಲಿ ನಿಮ್ಮ ಮಾತುಗಳನ್ನು ಖಂಡಿತ ನಂಬುವುದಿಲ್ಲ. ಸ್ವಲ್ಪ ಸೈನ್ಸನ್ನು ಓದಿಕೊಂಡ ನಾವು ಹೇಗೆ ನಂಬಬೇಕು? ಈ ಕಾಲದಲ್ಲಿ ಧನಗಳನ್ನು ಕಾಯುವವನೂ ಸಹ ನಿಮ್ಮ ಮಾತನ್ನು ನಂಬುವುದಿಲ್ಲ.**

**ಉತ್ತರ :-** ಧನ ಕಾಯುವವನಿಗೆ ದೊಡ್ಡದಾಗಿ ಬುದ್ಧಿ ವಿಕಾಸವಿರುವುದಿಲ್ಲ, ಆದ್ದರಿಂದ ಅವನು ನಂಬದಿದ್ದರೂ ಅದಕ್ಕೆ ಒಂದು ಅರ್ಥ ಇದೆ. ಅವನು ತಿಳುವಳಿಕೆ ಇಲ್ಲದವನು ಎಂದು ಸರಿಮಾಡಿಕೊಳ್ಳಬಹುದು. ಕಾಣಿಸುವ ಸಾಕ್ಷಿಗಳು ಎದುರುಗಡೆ ಇದ್ದರೆ ಕಲ್ಲಿನ ಯುಗ, ಮರಳಿನ ಯುಗ ಎಂದು ಹೇಳನವಾಗಿ ಮಾತನಾಡುತ್ತಾ ಬೆಲೆಯುಳ್ಳ ಸಮಾಚಾರವನ್ನು ತಿಳಿಯದಂತೆ ಬಿಡುವುದು ವಿಜ್ಞಾನವಲ್ಲದೆ ಅಜ್ಞಾನವಾಗುತ್ತದೆ. ಪೂರ್ವದಲ್ಲಿ ಒಬ್ಬ ಕವಿ "ತಿಳಿದವರಿಗೆ ಹೇಳಬಹುದು. ತಿಳಿಯದವರಿಗೆ ಹೇಳಬಹುದು. ಅರ್ಥ ತಿಳಿದು ತಿಳಿಯದವರಿಗೆ ಹೇಳುವುದು ಬ್ರಹ್ಮನಿಂದಲೂ ಸಹ ಆಗುವುದಿಲ್ಲ" ಎಂದು ಹೇಳಿದ್ದಾನೆ ಬಹುಶಃ ನಿಮ್ಮಂತಹವರನ್ನು ನೋಡಿಯೇ ಆ ಕವಿ ಹಾಗೆ ಹೇಳಿರಬಹುದು. ಸ್ವಲ್ಪ ವಿಜ್ಞಾನ ತಿಳಿದೂ ಕೂಡಾ ಪ್ರತ್ಯಕ್ಷವಾಗಿ ನಡೆಯುವ ವಿಷಯಗಳನ್ನು ಕುರಿತು ಏಕೆ ಈ ರೀತಿ ನಡೆಯುತ್ತಿವೆಯೆಂದು. ಆಲೋಚಿಸದಂತಿದ್ದರೇ ನಿಮ್ಮ ತಿಳುವಳಿಕೆ ವಿಜ್ಞಾನವಾದಂತಹದ್ದು ಹೇಗಾಗುತ್ತದೆ.!

**ಪ್ರಶ್ನೆ :- ಈ ಮಧ್ಯಕಾಲದಲ್ಲಿ ಒಂದು ಜಾಂಡೀಸ್ ರೋಗ (ಕಾಮಾಲೆ ರೋಗ) ಇರುವ ವ್ಯಕ್ತಿ ಡಾಕ್ಟರ್ ಹತ್ತಿರಕ್ಕೆ ಹೋಗಿ ಚಿಕಿತ್ಸೆ ಮಾಡಿಸಿಕೊಳ್ಳದಂತೆ ಜಾಂಡೀಸ್‌ಗೆ ಮಂತ್ರ, ಅಂತ್ರ ಹಾಕುತ್ತೇನೆಂದು ಹೇಳಿದ ವ್ಯಕ್ತಿಯ ಹತ್ತಿರಕ್ಕೆ ಹೋಗಿದ್ದಾನೆ. ಅಲ್ಲಿ ಮಂತ್ರಗಳಿಂದಾಗಲಿ, ಅಂತ್ರಗಳಿಂದಾಗಲಿ ಗುಣವಾಗಲಿಲ್ಲ. ಕಾಮಾಲೆ ತೀವ್ರ ಮಟ್ಟಕ್ಕೆ ಸೇರುವುದರಿಂದ ಕೊನೆಗೆ ಆಸ್ಪತ್ರೆಗೆ ಹೋಗುವುದು ನಡೆದಿದೆ. ಆಸ್ಪತ್ರೆಯಲ್ಲಿ ಡಾಕ್ಟರುಗಳು ರೋಗವು ಹೆಚ್ಚಾಗಿರುವುದರಿಂದ 20 ದಿನಗಳು ಚಿಕಿತ್ಸೆ ಮಾಡಿ ರೋಗವನ್ನು ಶರೀರದಲ್ಲಿ ಇಲ್ಲದಂತೆ ಮಾಡಿದ್ದಾರೆ. ರೋಗ ಭೂತವಾದಾಗ (ಜೀವಿಯಾದಾಗ) ಆ ಮಾಂತ್ರಿಕನ ಮಾತು ಕೇಳಿ ವ್ಯಕ್ತಿಯಲ್ಲಿನ ರೋಗ ವ್ಯಕ್ತಿಯನ್ನು ಬಿಟ್ಟು ಏಕೆ ಹೋಗಲಿಲ್ಲ? ನೀವು ಹೇಳುವ ಮಾತು ಅಲ್ಲಿ ಏನಾಗಿದೆ? ನೀವು ಹೇಳುವುದೆಲ್ಲ ವ್ಯರ್ಥ ಪ್ರಲಾಪ ಅಲ್ಲವೆ?**

**ಉತ್ತರ :-** ಮನುಷ್ಯನಿಗೆ ಆರೋಗ್ಯ ಚೆನ್ನಾಗಿಲ್ಲ ಎಂದರೆ, ಅದು ಎರಡು ಕಾರಣಗಳಿಂದ ನಡೆಯುವುದು. 'ರೋಗಗಳಿಂದ' ಶರೀರದಲ್ಲಿ ಆರೋಗ್ಯ

ಸರಿಯಾಗಿ ಇಲ್ಲದೆ ಇರಬಹುದು. ಉದಾಹರಣೆಗೆ ಮುದುಕನ ವಯಸ್ಸಿನಲ್ಲಿ ಶರೀರದಲ್ಲಿ ಅವಯವಗಳು ಬಲಹೀನವಾಗಿರುವುದದರಿಂದ ಶರೀರದಲ್ಲಿ ನಡೆಯಬೇಕಾದ ಕೆಲಸಗಳು ಸರಿಯಾಗಿ ನಡೆಯದಿದ್ದರೆ ಅನಾರೋಗ್ಯದಿಂದ ನರಳುತ್ತಿರುವುದು ನಡೆಯುತ್ತಿರುತ್ತದೆ. ಇದು ಸಹಜ ಸಿದ್ಧವಾಗಿ ನಡೆಯುವ ಕಾರಣ. ವೃದ್ಧಾಪ್ಯ ಕಾರಣದಿಂದ ಶರೀರದಲ್ಲಿನ ಅವಯವಗಳು ತಮ್ಮತಮ್ಮ ಕಾರ್ಯಗಳನ್ನು ಸರಿಯಾಗಿ ಮಾಡಲಾರೆವು. ಆಗ ಶರೀರದಲ್ಲಿ ಅನೇಕ ಸಮಸ್ಯೆಗಳು ಏರ್ಪಡುತ್ತವೆ. ಅವೆಲ್ಲವೂ ರೋಗಗಳಲ್ಲ. ರೋಗಗಳಿಂದ ಆ ಸಮಸ್ಯೆಗಳು ಬರಲಿಲ್ಲ. ಜೀರ್ಣಾಶಯದಲ್ಲಿ ವೃದ್ಧಾಪ್ಯ ಕಾರಣದಿಂದ ಹಸಿವು ಕಡಿಮೆಯಾಗು ವುದು. ತಿಂದ ಆಹಾರ ಜೀರ್ಣವಾಗದಿರುವುದು ನಡೆಯುತ್ತಿರುತ್ತದೆ. ಇದನ್ನು 'ಶರೀರ ಲೋಪ'ದ ಕೆಳಗೆ ಜಮಕಟ್ಟಬೇಕು ಆದರೆ, ಅದನ್ನು 'ರೋಗ' ಎಂದು ಹೇಳಬಾರದು. ವೃದ್ಧಾಪ್ಯ ಬರುವುದಕ್ಕಿಂತ ಮುಂಚೆ, ಯುಕ್ತ ವಯಸ್ಸಿನಲ್ಲಿ ಕೂಡ ಶರೀರದಲ್ಲಿ ಅವಯವ ಸಮನ್ವಯ ತಪ್ಪಿಹೋಗುವುದರಿಂದ, ರಸಾಯನಿಕ ಚರ್ಯೆ ಹೆಚ್ಚು ಕಡಿಮೆ ಆಗುವುದರಿಂದ, ಇತರೆ ಕಾರಣಗಳಿಂದ ಕೆಲವು ಅವಯವಗಳು ಬಲಹೀನವಾಗುವುದರಿಂದ, ಆಹಾರದಿಂದ ಆದರೂ, ಮತ್ತು ಪಾನೀಯಗಳಿಂದಾದರೂ, ಶರೀರದಲ್ಲಿ ವಿಷ ಪ್ರಭಾವ ಏರ್ಪಡುವು ದರಿಂದಾದರು ಅನಾರೋಗ್ಯ ನಡೆಯಬಹುದು. ಅವುಗಳನ್ನು ರೋಗಗಳ ಕೆಳಗೆ ಜಮಕಟ್ಟಬಾರದು. ಈಗ ನೀವು ಹೇಳಿದ ಜಾಂಡೀಸ್ ರೋಗ ಅಲ್ಲ. ಹೀಗೆ ಅನೇಕಗಳು ರೋಗಗಳಲ್ಲದ ಅನಾರೋಗ್ಯಗಳು ಇವೆ.

ಶರೀರದಲ್ಲಿ ಯಾವ ತರಹದ ಲೋಪಗಳು ಇಲ್ಲದಿದ್ದರೂ ಹೊರಗಡೆ ಯಿಂದ ಪ್ರವೇಶಿಸುವ ಕ್ರಿಮಿಗಳ ಮುಖಾಂತರ ಏರ್ಪಡುವ ಅನಾರೋಗ್ಯಗಳನ್ನು ರೋಗಗಳಿಂದ ನಡೆದ ಕೆಲಸವೆಂದು ಹೇಳಬಹುದು. ರೋಗ ಕ್ರಿಮಿಗಳಿಂದ ಬರುವ ಅನೇಕವಾದ ರೋಗಗಳು ಇವೆ. ಅವುಗಳಲ್ಲಿ ಕೆಲವನ್ನು ನಾವು ನೋಡಿದವುಗಳನ್ನು, ನಮಗೆ ತಿಳಿದವುಗಳನ್ನು ಕುರಿತು ಹೇಳಿಕೊಂಡರೂ ಕೆಲವು ಹತ್ತು ಸಂಖ್ಯೆಯಲ್ಲಿ ರೋಗಗಳು ಇವೆ. ನಮಗೆ ತಿಳಿಯದ ರೋಗಗಳು ಇನ್ನು

ಹೊಸದಾಗಿ ಬರುವಂತಹ ರೋಗಗಳು ಇನ್ನು ಕೆಲವು ನೂರಾರೂ ಸಂಖ್ಯೆಯಲ್ಲಿ ಇವೆ. ರೋಗಗಳು ಶರೀರದೊಳಗೆ ಯಾವಾಗಾದರೂ ಸೇರಬಹುದು. ಶರೀರದೊಳಗೆ ರೋಗಗಳು ಬರಬಹುದು ಪುನಃ ಹೋಗಬಹುದು. ಆದರೆ ಶರೀರದಲ್ಲಿನ ಲೋಪಗಳು ಒಂದುಸಲ ಬಂದರೆ ಬೇಗನೆ ಹೋಗುವುದಿಲ್ಲ. ಕೆಲವು ಲೋಪಗಳು ಸ್ಥಿರಸ್ಥಾಯಿಯಾಗಿ ಇರುತ್ತವೆ ಕೆಲವು ಲೋಪಗಳನ್ನು ಬೇಗನೆ ಸರಿಮಾಡಿಕೊಳ್ಳಬಹುದು. ಕೆಲವು ಲೋಪಗಳು ಸರಿಮಾಡುವುದಕ್ಕೂ ಸಹ ಸಾಧ್ಯವಾಗುವುದಿಲ್ಲ. ಹೀಗೆ ಕೆಲವು ವಿಧಗಳಾದ ಲೋಪಗಳು ಶರೀರದಲ್ಲಿ ಸಹಜವಾಗಿ ಏರ್ಪಡುತ್ತವೆ.

ಕಣ್ಣುಗಳಲ್ಲಿ ಬರುವ ದೃಷ್ಟಿ ಲೋಪದಿಂದ ಏರ್ಪಟ್ಟಿರುವ ಸಮಸ್ಯೆಯನ್ನು ಕಣ್ಣಿನ ಹೊರಗೆ ಕನ್ನಡಕ ಬಳಸಿ ಸರಿಮಾಡಿಕೊಳ್ಳಬಹುದು. ಗುಂಡಿಗೆಯಲ್ಲಿನ ರಕ್ತ ನಾಳಗಳು ಮುಚ್ಚಿಕೊಂಡು ಗುಂಡಿಗೆಗೆ ರಕ್ತ ಸರಿಯಾಗಿ ಸರಬರಾಜು ಆಗದೆ ಬರುವ ಗುಂಡಿಗೆ ನೋವನ್ನು ರಕ್ತನಾಳಗಳು ಶುಭ್ರಮಾಡಿ ಸರಿಮಾಡಿಕೊಳ್ಳ ಬಹುದು. ಕಾಲೇಯ (ಲಿವರ್) ಕೆಲಸದಲ್ಲಿ ಸಮನ್ವಯ ಲೋಪದಿಂದ ಜಾಂಡೀಸ್ ಬರುವ ಅವಕಾಶ ಇದೆ. ಲಿವರನ್ನು ಸರಿಯಾಗಿ ಕೆಲಸಮಾಡುವಂತೆ ಮಾಡುವುದರಿಂದ ಕಾಮಾಲೆ ಇಲ್ಲದಂತೆ ಹೋಗಬಲ್ಲದು. ಈ ವಿಧವಾಗಿ ಶರೀರಲ್ಲಿ ಏರ್ಪಡುವ ಲೋಪಗಳು ಕೆಲವನ್ನು ಸರಿಮಾಡಿಕೊಳ್ಳಬಹುದು. ಕೆಲವನ್ನು ಸರಿಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಉಬ್ಬಸ (ಆಸ್ತಮಾ) ಇದು ರೋಗ ಅಲ್ಲ. ಮನುಷ್ಯನ ಮೆದುಳಿನಲ್ಲಿ ಒಂದು ಭಾಗದಲ್ಲಿ ಏರ್ಪಟ್ಟಿರುವ ಬಲಹೀನತೆಯಿಂದ ಉಬ್ಬಸ ಬರುತ್ತದೆ. ಈ ಲೋಪವನ್ನು ಸರಿಮಾಡಿಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಇದು ಒಂದುಸಲ ಏರ್ಪಟ್ಟರೆ ಜೀವನವೆಲ್ಲಾ ಇರುತ್ತದೆ. ತಾತ್ಕಾಲಿಕವಾಗಿ ಸ್ವಲ್ಪ ಉಪಶಮನವನ್ನು ಔಷಧಗಳ ಮೂಲಕ ಪಡೆಯಬಹುದು. ಅಷ್ಟೇ ಹೊರತು ಶಾಶ್ವತವಾಗಿ ಗುಣ ಮಾಡಿಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ.

ಈ ವಿಧವಾಗಿ ಶರೀರದಲ್ಲಿ ಆರೋಗ್ಯ, ಅನಾರೋಗ್ಯಗಳನ್ನು ಉಂಟುಮಾಡುವುವು ಒಂದು ರೋಗಗಳು, ಎರಡು ಶರೀರ ಲೋಪಗಳು

ಇವೆ. ಆದರೆ ಈ ವಿಷಯ ತಿಳಿಯದ ಮನುಷ್ಯರು ಎಲ್ಲವನ್ನು ರೋಗಗಳೆಂದೇ ಹೇಳುತ್ತಿದ್ದಾರೆ. ಶರೀರ ಲೋಪಗಳನ್ನು ಕೂಡಾ ರೋಗಗಳಾಗಿ ಲೆಕ್ಕಿಸುತ್ತಿದ್ದಾರೆ. ಶರೀರ ಲೋಪವಾದ ಕಾಮಾಲೆಯನ್ನು ರೋಗವಾಗಿ ಲೆಕ್ಕಹಾಕುತ್ತಿದ್ದಾರೆ. ಹಾಗೆಯೇ ಶರೀರ ಲೋಪವಾದ ಉಬ್ಬಸವನ್ನು (ಆಸ್ತಮಾವನ್ನು) ಉಬ್ಬಸರೋಗ ವೆಂದು ಹೇಳುತ್ತಿದ್ದಾರೆ. ಗುಂಡಿಗೆಯಲ್ಲಿ ಉಂಟಾಗುವ ಲೋಪಗಳನ್ನು ಗುಂಡಿಗೆ ವ್ಯಾಧಿ ಎಂದು ಹೇಳುತ್ತಿದ್ದಾರೆ. ಈ ವಿಧವಾಗಿ ಬಹಳ ಲೋಪಗಳನ್ನು ಮನುಷ್ಯರು ರೋಗಗಳಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಕ್ರಿಮಿ ಸಮುದಾಯದಿಂದ ಆಗುವ ಏಡ್ಸ್, ಕಲರಾ, ಮಶೂಚಿ, ಪ್ಲೇಗು, ಡೆಂಗ್ಯೂಫೀವರ್, ಹೊಸದಾಗಿ ಬಂದಿರುವ ಎಬೋಲಾ, ಜಿಕಾ, ಕ್ಯಾನ್ಸರ್, ಕಳ್ಳಕಲಕ, ಅತಿಸಾರ, ಕ್ಷಯ ಮೊದಲಾದವೆಲ್ಲ ರೋಗಗಳೆಂದು ಹೇಳಬಹುದು. ರೋಗಗಳು ಮಂತ್ರಗಳಿಗು, ಯಂತ್ರಗಳಿಗು ಕೂಡಾ ಹೋಗುವುದಿಲ್ಲ. ಶರೀರ ಲೋಪವಾದ ಕಾಮಾಲೆ ಶರೀರಲೋಪ ಆಗಿರುವುದರಿಂದ ಮಂತ್ರಗಳು, ಯಂತ್ರಗಳು ಕಾಮಾಲೆ ರೋಗವನ್ನು ಗುಣ ಮಾಡಲಾರವು. ಶರೀರ ಲೋಪಗಳನ್ನು ಜ್ಞಾನವಾಗಲಿ, ಜ್ಞಾನವನ್ನು ತಿಳಿದ ಯೋಗಿಗಳಾಗಲಿ ಗುಣ ಮಾಡಲಾರರು. ರೋಗಗಳನ್ನು ಯೋಗಿಗಳು ಹೇಳಿ ಗುಣ ಮಾಡಬಲ್ಲರು. ಔಷಧಿಗಳಿಲ್ಲದ ರೋಗಗಳು ಸಹಿತವು ಯೋಗಿಗಳ ಮಾತನ್ನು ಕೇಳುತ್ತವೆ.

ದೇಶದಲ್ಲಿ ಕೆಲವು ರೋಗಗಳು ಬಹಳ ಅಪಾಯಕಾರಕವಾಗಿದ್ದರೂ, ಕೆಲವು ಸಾಧಾರಣವಾಗಿ ಬಾಧಿಸುತ್ತವೆ. ಕೆಲವು ರೋಗಗಳಿಗೆ ಔಷಧಿಗಳಿವೆ, ಕೆಲವು ರೋಗಗಳಿಗೆ ಔಷಧಿಗಳು ಇಲ್ಲ. ಔಷಧಿಗಳು ಇಲ್ಲದ ಏಯಿಡ್ಸ್ ರೋಗವು ಸಹಿತ ಯೋಗಿಗಳ ಮಾತನ್ನು ಕೇಳುತ್ತವೆ. ರೋಗಕ್ಕೆ ಯೋಗ ವಿರುದ್ಧವಾದುದು. ಆದ್ದರಿಂದ ಯಾವ ರೋಗವಾದರೂ ಯೋಗಿಗಳ ಮಾತನ್ನು ಅತಿಕ್ರಮಿಸಿ ಹೋಗುವುದಿಲ್ಲ. ಪ್ರತಿ ರೋಗ ಯೋಗಿಗಳ ಮಾತನ್ನು ಗೌರವಿಸುತ್ತವೆ. ಭೂಮಿಮೇಲೆ ಒಬ್ಬ ಯೋಗಿಗಳನ್ನು ಹೊರತು ಬೇರೆ ಯಾರನ್ನೂ ರೋಗಗಳು ಲೆಕ್ಕಮಾಡುವುದಿಲ್ಲ.

**ಪ್ರಶ್ನೆ :– ರೋಗಕ್ಕು ಯೋಗಕ್ಕು ಏನು ಸಂಬಂಧವಿದೆ. ರೋಗಗಳು ಯೋಗಿಗಳ ಮಾತನ್ನು ಏಕೆ ಗೌರವಿಸುತ್ತವೆ?**

**ಉತ್ತರ:–** ಭೂಮಿಮೇಲೆ ಪಾಪ ಮಾಡಿಕೊಂಡ ಮನುಷ್ಯರನ್ನು ಪೀಡಿಸಿ ಬಾಧಿಸುವುದಕ್ಕೆ ರೋಗಗಳು ಏರ್ಪಡಿಸಲ್ಪಟ್ಟಿವೆ. **'ರೋಗ ಒಂದು ಭೂತ'** ಎಂದು ಮೊದಲೇ ಹೇಳಿಕೊಂಡಿದ್ದೇವೆ. ಭೂತಗಳು, ಗ್ರಹಗಳು ಎರಡೂ ಮನುಷ್ಯರು ಮಾಡಿಕೊಂಡ ಪಾಪಗಳನ್ನು ಅನುಭವಿಸುವಂತೆ ಮಾಡುವುದಕ್ಕೆ ಇವೆ. ಮನುಷ್ಯರು ಪಾಪಪುಣ್ಯಗಳನ್ನು ಅನುಭವಿಸುವುದಕ್ಕೆ ಜನ್ಮಗಳು ಹೆತ್ತುತ್ತಿದ್ದಾರೆ. ಮನುಷ್ಯರ ಪಾಪಪುಣ್ಯಗಳನ್ನು ಅನುಭವಿಸುವುದಕ್ಕೆ ದೇವರ ಪಾಲಕರಾಗಿ ಭೂತಗಳು ಗ್ರಹಗಳು ಇವೆ. ಭೂತಗಳು ಗ್ರಹಗಳು ದೇವರ ಪಾಲನೆಯಲ್ಲಿ ಭಾಗವಾಗಿವೆ. ದೇವರು ಏನು ಮಾಡುವವನಲ್ಲ. ದೇವರು ಏನು ಅಂದುಕೊಳ್ಳುತ್ತಾನೊ ಅಂದುಕೊಂಡಿರುವುದನ್ನು ಭೂತಗಳು ಗ್ರಹಗಳು ಗ್ರಹಿಸಿಕೊಂಡು ದೇವರ ಸಂಕಲ್ಪವನ್ನು ಅನುಸರಿಸಿ ಕಾರ್ಯಗಳನ್ನು ಮಾಡುತ್ತಾನೆ. ಆದ್ದರಿಂದ ದೇವರ ಪಾಲನೆಯಲ್ಲಿ ಪಾಲಕರಾಗಿ ಭೂತಗಳು ಗ್ರಹಗಳು ಕೆಲಸಮಾಡುತ್ತಿವೆಯೆಂದು ಹೇಳುತ್ತಿದ್ದೇವೆ. ಪಾಪ ಪಾಲನೆಯಲ್ಲಿ ತಮ್ಮ ಕರ್ತವ್ಯವನ್ನು ನಿರ್ವಹಿಸುವ ಭೂತಗಳು, ಗ್ರಹಗಳು ಒಂದು ದೇವರ ಆದೇಶವನ್ನು ಹೊರತು ಯಾರ ಮಾತು ಕೇಳುವುದಿಲ್ಲ.

**ಪ್ರಶ್ನೆ :– ಒಂದುಮಾತು! ನೀವು ಇದಕ್ಕೆ ಮೊದಲೇ "ರೋಗಗಳು ಯೋಗಿಗಳ ಮಾತುಗಳನ್ನು ಕೇಳುತ್ತವೆ" ಎಂದು ಹೇಳಿದ್ದೀರ. ರೋಗ ಒಂದು ಭೂತವೆಂದು ಸಹ ಹೇಳಿದ್ದೀರ. ಆದರೆ "ಯಾವ ರೋಗ ಭೂತಗಳಾದರೂ ಯೋಗಿಗಳ ಮಾತನ್ನು ಗೌರವಿಸುತ್ತವೆ" ಎಂದು ಹೇಳಿರುವುದಕ್ಕೆ, ರೋಗಗಳು ಯೋಗಿಗಳ ಮಾತನ್ನು ಏಕೆ ಕೇಳುತ್ತವೆ? ಎಂದು ಕೇಳಿದ್ದೆನು. ರೋಗ ಭೂತಗಳು ಯೋಗಿಗಳ ಮಾತುಗಳನ್ನು ಕೇಳುತ್ತವೆಯೆಂದು ಹೇಳಿದ ನೀವೇ ಈಗ "ಭೂತಗಳು, ಗ್ರಹಗಳು ಒಬ್ಬ ದೇವರ ಮಾತನ್ನು ಹೊರತು ಯಾರ ಮಾತನ್ನು ಕೇಳುವುದಿಲ್ಲ' ಎಂದು ಹೇಳಿದ್ದೀರ. ಇದಕ್ಕೂ ಮೊದಲು ಒಂದು ವಿಧವಾಗಿ, ಈಗ ಮತ್ತೊಂದು ವಿಧವಾಗಿ**

**ಹೇಳುವುದನ್ನನುಸರಿಸಿ ಇದರಲ್ಲಿ ಯಾವುದೊ ಒಂದು ಅಸತ್ಯವೆಂದು ತಿಳಿಯುತ್ತಿದೆ. ಹಾಗೆ ಅಸತ್ಯವನ್ನು ನೀವು ಹೇಳಬೇಕಾದ ಅಗತ್ಯವೇನು ಬಂದಿದೆ?**

**ಉತ್ತರ :–** ಸಮಯವನ್ನು ಸಂದರ್ಭವನ್ನು ದೃಷ್ಟಿಯಲ್ಲಿಟ್ಟುಕೊಂಡು ನಿನಗೆ ಅರ್ಥವಾಗುವುದಕ್ಕೆ ನಾನು ಹೇಳಬೇಕಾದ ವಿಧಾನದ ಪ್ರಕಾರ ಹೇಳುತ್ತಿದ್ದೇನೆ. ಒಂದೇಸಲಕ್ಕೆ ಯಾರೂ ಯಾವುದನ್ನು ಗ್ರಹಿಸಿಕೊಳ್ಳುವುದಿಲ್ಲ. "ಅನ್ನಪ್ರಾಸನ ದಿನ ಉಪ್ಪಿನ ಕಾಯಿ ಅನ್ನವಾ!" ಎಂಬ ಗಾದೆಯ ಪ್ರಕಾರ ಮೊದಲು ಒಂದುಸಲ ಸತ್ಯವನ್ನು ಎಲ್ಲಾ ಹೇಳಬಾರದು. ಸತ್ಯವನ್ನು ಒಂದೇ ಸಲ ಅಲ್ಲದೇ ಹಂತಹಂತವಾಗಿ ಹೇಳಬೇಕೆನ್ನುವುದು ದೊಡ್ಡವರ ಅಭೀಷ್ಟ. ಆದ್ದರಿಂದ ಅನ್ನಪ್ರಾಸನ ದಿನ ಎಂದರೆ ಮೊದಲು ಅನ್ನ ತಿನಿಸುವ ದಿನ ರುಚಿಕರವಾದ ಉಪ್ಪಿನಕಾಯನ್ನು ಇಡಬಾರದೆಂದು ಹೇಳಿದ್ದಾರೆ. ಅಷ್ಟೇಅಲ್ಲದೆ ಚಿಕ್ಕವ ಯಸ್ಸಿನಲ್ಲಿರುವ ಮಕ್ಕಳಿಗೆ ಇಲ್ಲದ ಭೂತವನ್ನು ಕುರಿತು ಹೇಳಿ ಭಯವಿಡುತ್ತಾರೆ. ಬೂಚನು ಎಂಬ ಮಾತು ಪೂರ್ತಿ ಅಸತ್ಯವೇ ಆದರೂ ಆ ಸಮಯದಲ್ಲಿ ಹಾಗೆ ಹೇಳುವುದು ಅಗತ್ಯ. ಆದ್ದರಿಂದ ಭೂತಗಳು, ಗ್ರಹಗಳು ಯೋಗಿಗಳ ಮಾತನ್ನು ಗೌರವಿಸುತ್ತವೆನ್ನುವುದು ಸತ್ಯವೇ. ಆದರೆ ಅದನ್ನೇ ವಿಶದವಾಗಿ ಈಗ ಹೇಳುತ್ತಿರುವುದರಿಂದ "ದೇವರ ಮಾತನ್ನು ಹೊರತು ಯಾರಮಾತನ್ನು ಭೂತಗಳು ಲೆಕ್ಕಮಾಡುವುದಿಲ್ಲ" ಎಂದು ಹೇಳಬೇಕಾಗಿ ಬಂದಿದೆ. ಹಾಗೆ ಲೆಕ್ಕಮಾಡದಿರುವವು ನಂತರ ಸಮಯ ಬಂದಾಗ ಯೋಗಿಗಳ ಮಾತುಗಳನ್ನು ಗೌರವಿಸುವುದಕ್ಕೆ ತಕ್ಕ ವಿಧಾನವೇನೊ ಹೇಳುವುದರಿಂದ ಸತ್ಯ ಒಂದೇ ಕ್ರಮವಾಗಿ ಅರ್ಥವಾಗುತ್ತದೆ. ಆದ್ದರಿಂದ ನಾನು ವರಸಕ್ರಮದಲ್ಲಿ ದೇವರ ಮಾತನ್ನು ಹೊರತು ಭೂತಗಳು ಯಾರ ಮಾತನ್ನು ಕೇಳುವುದಿಲ್ಲ" ಎಂದು ಹೇಳಿದ್ದೇನೆ. ನಾನು ಅಲ್ಲಿಗೆ ಸುಮ್ಮನಿದ್ದರೇ ನೀವು ಪ್ರಶ್ನೆ ಕೇಳಿದರೂ ತಕ್ಕಂತೆ ಇರುತ್ತಿತ್ತು. ನಾನು ನನ್ನ ಮಾತುಗಳನ್ನು ನಿಲ್ಲಿಸುವ ಮೊದಲೇ ಇನ್ನು ಹೇಳುವುದು ಇದ್ದಾಗಲೇ ನೀನು ಪ್ರಶ್ನಿಸುವುದು ಒಂದು ವಿಧವಾಗಿ ಆತುರತೆ ಎಂದು ಹೇಳಬಹುದು. ಮತ್ತೊಂದು ವಿಧವಾಗಿ ಅಸಂದರ್ಭ ಪ್ರಲಾಪ ಎಂದೂ ಸಹ ಹೇಳಬಹುದು.

ನೀನು ಕೇಳಿದರೂ ಕೇಳದಿದ್ದರೂ ನಾನು ಪೂರ್ತಿ ವಿಷಯವನ್ನು ಹೇಳಬೇಕೆಂದು ಕೊಂಡಿದ್ದೇನೆ. ಆದ್ದರಿಂದ ಹೇಳುವಂತಹ ವಿಷಯವನ್ನು ಜಾಗರೂಕತೆಯಿಂದ ಕೇಳಿರೆಂದು ಹೇಳುತ್ತಿದ್ದೇನೆ.

ಮನುಷ್ಯರು ಕರ್ಮಗಳನ್ನು ಅನುಭವಿಸುವುದಕ್ಕೆ ಭೂಮಿಮೇಲೆ ಜನ್ಮಿಸುತ್ತಿದ್ದಾರೆ. ಗತ ಜನ್ಮಗ್ಗಳಲ್ಲಿ ಮನುಷ್ಯ ತಾನು ಸ್ವತಃವಾಗಿ ಮಾಡಿಕೊಂಡ ಕರ್ಮಗಳನ್ನು ಅನುಭವಿಸುವುದಕ್ಕೆ ಮಾತ್ರವೇ ಹುಟ್ಟಬೇಕಾಗಿ ಬರುತ್ತಿದೆ. ಗತಜನ್ಮಗಳಲ್ಲಿ ಮನುಷ್ಯ ಯಾವ ಪಾಪಗಳನ್ನು, ಯಾವ ಪುಣ್ಯಗಳನ್ನು ಮಾಡಿರುವುದು ಮನುಷ್ಯನಿಗೆ ಜ್ಞಾಪಕ ಇರುವುದಿಲ್ಲ. ಜ್ಞಾಪಕವಿದ್ದರೂ ಇಲ್ಲದಿದ್ದರೂ ಮನುಷ್ಯನ ಕರ್ಮಗಳು ಎಷ್ಟು ಇರುವುದು ಮನುಷ್ಯನಿಗೆ ತಿಳಿದಿಲ್ಲ. ಹಿಂದಿನ ಜನ್ಮಗಳಲ್ಲಿ ಮಾಡಿಕೊಂಡ ಕರ್ಮಗಳನ್ನು ಜೀವಿಸಿರುವ ಜನ್ಮದಲ್ಲಿ ಅನುಭವಿಸಬೇಕಾಗಿರುತ್ತದೆ. ಮನುಷ್ಯ ಹುಟ್ಟಿದಾಗಲೇ ಜೀವನದಲ್ಲಿ ಯಾವಾಗ ಏನು ಅನುಭವಿಸಬೇಕಾಗಿರುವುದು ಪ್ರಾರಬ್ಧಕರ್ಮವೆಂಬ ಹೆಸರಿನಿಂದ ಆ ಜನ್ಮದಲ್ಲಿನ ಜೀವನಕ್ಕೆ ನಿರ್ಣಯಿಸಲಾಗುತ್ತದೆ. ಹುಟ್ಟಿದ ಸಮಯದಲ್ಲಿಯೇ ನಿರ್ಣಯಿಸುವ ಕರ್ಮವನ್ನು ನಮ್ಮ ಹಿರಿಯರು, ಜ್ಯೋತಿಷ್ಯ ಪಂಡಿತರು **"ಜಾಘತಕ"** ಎಂದು ಕರೆಯುತ್ತಾರೆ. 'ಜ' ಎಂದರೆ ಹುಟ್ಟುವುದೆಂದು, ಘತಕ ಎಂದರೆ ವ್ಯೂಹ ಎಂದು ಹೇಳಬಹುದು. ವ್ಯೂಹ ಎಂದರೆ 'ಮೊದಲೆ ನಿರ್ಣಯಿಸಲ್ಪಟ್ಟಿರುವು ದೆಂದು' ಅರ್ಥ. ಹುಟ್ಟಿದಾಗಲೇ ಆ ಜನ್ಮಕ್ಕೆ ಬೇಕಾದ ಪ್ರಾರಬ್ಧಕರ್ಮವನ್ನು ನಿರ್ಣಯಿಸಿಡುವುದನ್ನು "ಜಾ ಘತಕ" ಎಂದು ಹೇಳುತ್ತಿದ್ದಾರೆ. ಯಾರ ಜಾಘತಕದಲ್ಲಿ ಏನು ನಿರ್ಣಯಿಸಲ್ಪಟ್ಟಿರುವುದು ಯಾರಿಗೂ ತಿಳಿದಿಲ್ಲ. ಜಾಘತಕ ಎನ್ನುವ ಮಾತು ಕಾಲಕ್ರಮದಲ್ಲಿ ಬದಲಾವಣೆಯಾಗಿ ಕೊನೆಗೆ ಜಾತಕವಾಗಿ ನಿಂತುಹೋಗಿದೆ. ಈ ದಿನ 'ಜಾಘತಕ' ಎನ್ನುವ ಹೆಸರನ್ನು ಯಾರೂ ಹೇಳುತ್ತಿಲ್ಲ. ಎಲ್ಲರೂ 'ಜಾತಕ' ಎನ್ನುವ ಹೆಸರಿನಿಂದಲೇ ಕರೆಯುತ್ತಿದ್ದಾರೆ. ಆದರೂ ಯಾರ ಜಾತಕದಲ್ಲಿ ಏನಿದೆಯೋ ಯಾರಿಗೂ ತಿಳಿದಿಲ್ಲ.

**ಪ್ರಶ್ನೆ :– ಇಂದು ಜ್ಯೋತಿಷ್ಯವನ್ನು ತಿಳಿದವರು ಎಷ್ಟೋಜನ ಅಲ್ಲದಿದ್ದರೂ ಕೆಲವರಾದರೂ ಸಕ್ರಮವಾಗಿ ಜಾತಕಗಳು ಬರೆಯುವವರು ಇದ್ದಾರೆ. ಮನುಷ್ಯ ಹುಟ್ಟಿದ ಸಮಯವನ್ನನುಸರಿಸಿ, ಆಗಿನ ಗ್ರಹ ಪರಿಸ್ಥಿತಿಗಳನ್ನನುಸರಿಸಿ ಜಾತಕಗಳು ಬರೆಯುವವರಿದ್ದಾರೆಂದು ಎಲ್ಲರೂ ಹೇಳುತ್ತಿರುವಾಗ ಕೇಳಿದ್ದೇವೆ. ಹುಟ್ಟಿದ ಸಮಯದಲ್ಲಿ ಗ್ರಹಗಳ ಸ್ಥಾನಗಳನ್ನನುಸರಿಸಿ ಅಂದರೆ ಜಾತಕವನ್ನನುಸರಿಸಿ ನಡೆಯುವಂತಹ ಕಾರ್ಯಗಳನ್ನು ಅನುಭವಿಸುವಂತಹ ಕರ್ಮಗಳನ್ನು ಸುಖ ದುಃಖಗಳನ್ನು ಗುರುತಿಸುತ್ತಿದ್ದಾರೆಂದು ಕೇಳಿದ್ದೇವೆ. ಹಾಗಿರುವಾಗ ಜಾತಕ (ಜಾ ಘತಕದಲ್ಲಿ) ಇರುವ ಕರ್ಮಗಳು ತಿಳಿದಂತೆ ಅಲ್ಲವೆ! ನೀವೇನೊ ಯಾರ ಜಾತಕದಲ್ಲಿ ಏನಿದೆಯೊ ಯಾರಿಗೂ ತಿಳಿದಿಲ್ಲವೆಂದು ಹೇಳಿದ್ದೀರ. ಇಲ್ಲಿ ನಿಮ್ಮ ಮಾತನ್ನು ನಂಬಬೇಕಾ? ಅಥವಾ ಜ್ಯೋತಿಷ್ಯರು ಹೇಳುವ ಮಾತನ್ನು ನಂಬಬೇಕಾ? ಅಸಲು ಜಾತಕ ಎನ್ನುವುದು ವಾಸ್ತವವೇನಾ?**

**ಉತ್ತರ :– 'ಜಾತಕ'** ಎಂದು ಜಾಘತಕದಲ್ಲಿನ ಒಂದು ಅಕ್ಷರವನ್ನು ಬಿಟ್ಟು ಹೇಳಿದರೂ ಜಾತಕವೆನ್ನುವುದು ವಾಸ್ತವವೇ. ಹುಟ್ಟಿದ ಸಮಯವನ್ನನುಸರಿಸಿ, ಜಾಘತಕ ಎಂಬ ವ್ಯೂಹ ರಚನೆಯಲ್ಲಿ ಸಂಚಿತ ಕರ್ಮಗಳು ಪ್ರಾರಬ್ಧಕರ್ಮಗಳಾಗಿ ನಿರ್ಣಯಿಸಲ್ಪಡುವುದು ಸತ್ಯವೇ. ಆದರೆ ಜಾಘತಕವನ್ನು ಅನುಸರಿಸಿ ನೋಡಿದರೆ ಕರ್ಮಗಳನ್ನು ಪಾಲಿಸುವ ಹನ್ನೆರಡು ಗ್ರಹಗಳು, ಹನ್ನೆರಡು ಜೀವನರಾಶಿಗಳಲ್ಲಿ ಎಲ್ಲಿ ಹೇಗೆ ಇವೆಯೋ ತಿಳಿಯುತ್ತದೆ. ಜ್ಯೋತಿಷ್ಯ ಶಾಸ್ತ್ರವನ್ನು ತಿಳಿದವರು ಗ್ರಹಗಳ ಸ್ಥಿತಿಗತಿಗಳನ್ನು ಅನುಸರಿಸಿ ಆತನು ಜೀವನದಲ್ಲಿ ಮುಖ್ಯವಾಗಿ ಏನು ಅನುಭವಿಸುತ್ತಾನೊ ಸೂಚನೆಯಾಗಿ ಸ್ವಲ್ಪ ಗುರುತಿಸುತ್ತಾರೆ. ಅಷ್ಟು ಮಾತ್ರಕ್ಕೆ ಜಾತಕವೆಲ್ಲವನ್ನು ಗುರುತಿಸಿದಂತೆ ಅಲ್ಲ. ಜಾತಕ ಎನ್ನುವುದು ಒಂದು ಚಲನಚಿತ್ರವಿರುವ C.D ಅಂಥದ್ದು. C.D ಯಲ್ಲಿ ಚಲನ ಚಿತ್ರವೆಲ್ಲ ಇದ್ದರೂ ಅದು ಮೇಲ್ನೋಟಕ್ಕೆ ಕಾಣಿಸುವುದಿಲ್ಲ. ಒಂದು D.V.D ಯಲ್ಲಿ ಎರಡುನೂರು ಹಾಡುಗಳಿದ್ದರೂ D.V.D ಯನ್ನು ನೋಡಿದರೆ ಒಂದು ಹಾಡು ಸಹ ತಿಳಿಯುವುದಿಲ್ಲ. C.D ಆಗಲಿ, D.V.D ಯಾಗಲಿ ಪ್ಲೇಯರ್‌ನಲ್ಲಿ ಪ್ಲೇ

ಆದಾಗ ಮಾತ್ರವೇ ಅದರೊಳಗೆ ಒಳಗೊಂಡಿರುವ ಸಿನಿಮಾ ಆಗಲಿ, ಹಾಡುಗಳಾಗಲಿ ತಿಳಿಯುತ್ತವೆ. C.D ಪ್ಲೇ ಆಗುತ್ತಿರುವಾಗ ನಡೆಯುವ ಆಟದಲ್ಲಿ ಅಥವಾ ಕಾಣಿಸುವ ಆಟದಲ್ಲಿ ಕಷ್ಟಸುಖಗಳು ಪ್ರತ್ಯಕ್ಷವಾಗಿ ಕಾಣಿಸುತ್ತವೆ. C.D ಪ್ಲೇ ಆಗದಮುನ್ನ ಸಾಧಾರಣವಾಗಿ ಬೆಳ್ಳಗೆ ಕಾಣಿಸುವ ಒಂದು C.Dಯಲ್ಲಿ ಒಂದು ಕಷ್ಟವಾಗಲೀ, ಒಂದು ಸುಖವಾಗಲೀ ತಿಳಿಯಲಿಲ್ಲ. ಅದೇ ಪ್ಲೇ ಆದಾಗ ಅದರಲ್ಲಿ ಏನಿದೆಯೋ ಪ್ರತ್ಯಕ್ಷವಾಗಿ ತಿಳಿಯುತ್ತದೆ. ಹಾಗೆಯೇ ಜಾತಕ ಬಿಳಿಯಾಗಿ ಕಾಣಿಸುವ ಒಂದು C.D ಯಂಥದ್ದು. ಜಾತಕದಲ್ಲಿ ನಿಕ್ಷಿಪ್ತವಾಗಿರುವ ಸುಖದುಃಖಗಳು ಏನು ಕಾಣಿಸುವುದಿಲ್ಲ. C.D ಮೇಲೆ ಹಿಂದಿರುವ ಕೆಲವು ಗುರುತುಗಳನ್ನು ನೋಡಿ ಇದು ಹಾಡುಗಳ C.D ಇದು, ಸಿನಿಮಾ C.D ಎಂದು ಗುರುತಿಸಿ ಹೇಳುವಂತೆ ಈ ಜಾತಕ ಚೆನ್ನಾಗಿದೆ ಎಂದೋ, ಅಥವಾ ಈ ಜಾತಕ ಚೆನ್ನಾಗಿಲ್ಲವೆಂದೋ ಗುರುತಿಸುತ್ತಾರೆ. ದುಂಡನೆಯ ಪ್ಲೇಟಿನ ಮೇಲೆ C.D ಎಂದೋ, D.V.D ಎಂದೋ ಬರೆದಿರುವುದು, ಅದರಲ್ಲಿ ಸಿನಿಮಾ ಇದೆಯೋ, ಹಾಡುಗಳಿವೆಯೋ, ಮತ್ತೇನಾದರೂ ಇದೆಯೋ ಗುರುತಾಗಿ ಬರೆದಿರುವುದನ್ನನುಸರಿಸಿ ಅದು ಹಾಡಿನದೋ, ಪದ್ಯಗಳಿರುವುದೋ, ಚಲನಚಿತ್ರ ಇರುವುದೋ ಹೇಳಿದಂತೆ ಜಾತಕದಲ್ಲಿರುವ ಗ್ರಹಗಳ ಗುರುತುಗಳನ್ನು ನೋಡಿ ಈ ಜಾತಕ ಒಳ್ಳೆಯದಾಗಿ ನಡೆಯುವುದೊ, ಒಳ್ಳೆಯದಾಗಿ ನಡೆಯದಿರುವುದೊ ಎಂದು ಸ್ವಲ್ಪ ಗುರುತಿಸಿ ಹೇಳುವುದಕ್ಕೆ ಸಾಧ್ಯವಾಗುತ್ತದೆ. ಅದೂ **ಹನ್ನೆರಡು ಗ್ರಹಗಳನ್ನು** ಗುರುತಿಸಿದ ಜಾತಕದಲ್ಲಿ ಮಾತ್ರ ಸಾಧ್ಯವಾಗುತ್ತದೆ. ಈಗಿನ ಕಾಲದಲ್ಲಿ ಒಂಭತ್ತು ಗ್ರಹಗಳು ಹೊರತು ಹನ್ನೆರಡು ಗ್ರಹಗಳು ತಿಳಿದಿಲ್ಲ. ಆದ್ದರಿಂದ ಜಾತಕವನ್ನು ಹೇಳಲಾರೆರು.

ಒಬ್ಬ ಮನುಷ್ಯ ಜೀವನದಲ್ಲಿನ ಒಂದು ಸಮಸ್ಯೆಯನ್ನು ಕುರಿತು ಪ್ರಶ್ನಿಸಿದಾವಾಗ ಜ್ಯೋತಿಷ್ಯನು ಆ ಸಮಸ್ಯೆ ಕಷ್ಟವಾವಾದುದೊ ಅಥವಾ ಸುಲಭವಾದುದೋ ಜ್ಯೋತಿಷ್ಯದ ಪ್ರಕಾರ ಜಾತಕದಲ್ಲಿ ನೋಡಿ ಯಾವುದೋ ಒಂದನ್ನು ಹೇಳುತ್ತಾರೆ. ಅಷ್ಟೇ ಹೊರತು ಆ ಸಮಸ್ಯೆಯನ್ನು ಪೂರ್ತಿ ವಿವರವಾಗಿ

ಹೇಳಲಾರರು. ಒಬ್ಬನ ಜೀವನದಲ್ಲಿ ಓದನ್ನು ಕುರಿತು ನೋಡಬೇಕಾಗಿ ಬಂದಾಗ ವಿದ್ಯೆಗೆ ಅಧಿಪತಿಯಾದ ಚಂದ್ರ ಗ್ರಹವನ್ನು, ವಿದ್ಯಾಸ್ಥಾನವಾದ ಐದನೇ ಮನೆಯನ್ನು (ರಾಶಿಯನ್ನು) ನೋಡಿ ವಿದ್ಯೆ ಬರುತ್ತದೆಂದೋ, ವಿದ್ಯೆ ಬರುವುದಿಲ್ಲವೆಂದೋ ಹೇಳಬಹುದು. ಆದರೆ ವಿದ್ಯೆಯನ್ನು ಕುರಿತು ಪೂರ್ತಿ ವಿವರವಾಗಿ ಸಾಂಗೋಪಾಂಗವಾಗಿ (ಚಿಕ್ಕ ದೊಡ್ಡ ಸಮಸ್ಯೆಗಳನ್ನು ಕುರಿತು) ಹೇಳಲಾರೆವು. ಯಾರಾದರೂ ಪೂರ್ತಿ ವಿವರವಾಗಿ ಹೇಳುತ್ತೇನೆಂದು ಹೇಳಿದರೆ ಅದು ಅಸತ್ಯವೇ ಹೊರತು ಸತ್ಯವಲ್ಲ. ಹಾಗೆ ಜೀವನದಲ್ಲಿ ಸಮಸ್ಯೆಗಳಿಗೆ ಸ್ವಲ್ಪಮಟ್ಟಿನ ವಿವರವನ್ನು ಹೌದೋ ಅಲ್ಲವೋ ಹೇಳಬಹುದು. ಆದರೆ ಈ ಕಾಲದಲ್ಲಿ **12 ಗ್ರಹಗಳ ಜ್ಯೋತಿಷ್ಯ ಇಲ್ಲ**. ಕೇವಲ ನವಗ್ರಹಗಳ ಜ್ಯೋತಿಷ್ಯ ಮಾತ್ರ ಇರುವುದರಿಂದ ಸ್ವಲ್ಪಮಟ್ಟಿನ ಜ್ಯೋತಿಷ್ಯವನ್ನು ಕೂಡಾ ಸಕ್ರಮವಾಗಿ ಹೇಳದಂತಿದ್ದಾರೆ. ಹೌದೆಂದಿರುವುದು ಇಲ್ಲದಂತೆಹೋಗುತ್ತಿದೆ. ಇಲ್ಲವೆಂದಿರುವುದು ಸಕ್ರಮವಾಗಿ ನೆರವೇರುತ್ತಿದೆ. ಇದನ್ನನುಸರಿಸಿ ಜ್ಯೋತಿಷ್ಯವನ್ನು ಯಾರೂ ಸರಿಯಾಗಿ ಹೇಳಲಾರದ ಸ್ಥಿತಿ ಇದೆಯೆಂದು ಹೇಳಬಹುದು. ಆರು ಶಾಸ್ತ್ರಗಳಲ್ಲಿ ಜ್ಯೋತಿಷ್ಯ ಒಂದು ಶಾಸ್ತ್ರ ಅದರೂ, ಅದರಲ್ಲಿ ಸರಿಯಾಗಿ ಪರಿಶೋಧನೆಗಳು ನಡೆಯಲಿಲ್ಲ. ಉಳಿದ ಶಾಸ್ತ್ರಗಳು ಅಭಿವೃದ್ಧಿ ಆದಷ್ಟು ಜ್ಯೋತಿಷ್ಯಶಾಸ್ತ್ರ ಅಭಿವೃದ್ಧಿ ಆಗಲಿಲ್ಲ. ಆದ್ದರಿಂದ ಜ್ಯೋತಿಷ್ಯವನ್ನು ಯಾರೂ ಸರಿಯಾಗಿ ಹೇಳಲು ಆಗುತ್ತಿಲ್ಲವೆಂದು ಹೇಳಬಹುದು

**ಪ್ರಶ್ನೆ :– C.D ಯಲ್ಲಿ ಚಲನಚಿತ್ರ ಇರುವ ಹಾಗೆ ಪೂರ್ತಿಯಾಗಿ ಯಾರಿಗೂ ತಿಳಿಯದಂತೆ ಒಬ್ಬ ಮನುಷ್ಯ ಜೀವನ ಎಲ್ಲವೂ ಅವನ ಕರ್ಮಪತ್ರದಲ್ಲಿ ಎಂದರೆ ಜಾತಕದಲ್ಲಿ ಮಿಳಿತವಾಗಿದೆಯೆಂದು ಚೆನ್ನಾಗಿ ಅರ್ಥವಾಗುವ ಉಪಮಾನ ದೊಂದಿಗೆ ಹೇಳಿದ್ದೀರ, ಸಂತೋಷ. C.D ಯಲ್ಲಿ ಸಿನಿಮಾ ತಿಳಿಯುವಂತೆ ಅದು C.D ಪ್ಲೇಯರ್‌ನಲ್ಲಿ ಪ್ಲೇ ಆದಾಗಲೇ ಸಿನಿಮಾ ಪೂರ್ತಿ ವಿವರವಾಗಿ ಕಾಣಿಸುವಂತೆ, ಯಾವ ಮನುಷ್ಯನ ಜಾತಕದಲ್ಲಿನ ಕರ್ಮವಾದರೂ ಅದು ಅವನ ಜೀವನದಲ್ಲಿ ಜಾರಿ ಆಗುವಾಗ ಪೂರ್ತಿಯಾಗಿ ತಿಳಿಯುತ್ತದೆ. C.D ಯನ್ನು ನೋಡಿ**

**ಸಿನಿಮಾದಲ್ಲಿನ ಪೂರ್ತಿ ಸಂಘಟನೆಗಳನ್ನು ಹೇಗೆ ಹೇಳಲಾರೆವೋ, ಹಾಗೆಯೇ ಜಾತಕವನ್ನು ನೋಡಿ ಕಷ್ಟಸುಖಗಳನ್ನು ಪೂರ್ತಿ ವಿವರವಾಗಿ ಹೇಳಲಾರೆವು. ಆದರೇ ಈಗ ಗಿಡಮೊದಲಾ ಬೀಜ ಮೊದಲಾ?, ಮೊಟ್ಟೆ ಮೊದಲಾ ಕೋಳಿ ಮೊದಲಾ? ಎನ್ನುವಂತೆ, C.D ಮೊದಲಾ ಸಿನಿಮಾ ಮೊದಲಾ? ಎಂದು ಪ್ರಶ್ನಿಸಬಹುದು. ಈ ಪ್ರಶ್ನೆಗೆ ನೀವು ಯಾವ ಉತ್ತರವನ್ನು ಹೇಳುತ್ತೀರಾ?**

**ಉತ್ತರ :–** ಈ ಪ್ರಶ್ನೆಗಳೆಲ್ಲ ಒಂದು ಉತ್ತರವಾದರೆ ಮತ್ತೊಂದು ಪ್ರಶ್ನೆಯಾಗಿ ಉಳಿಯುತ್ತಿರುತ್ತದೆ. ಇವುಗಳಿಗೆಲ್ಲ ಸರಿಯಾದ ವಿವರಣೆ ಬಂದಾಗಲೇ ಪ್ರಶ್ನೆಯಿಲ್ಲದ ಉತ್ತರವಾಗಿ ನಿಂತುಹೋಗುತ್ತದೆ. ಅಲ್ಲಿಯವರೆಗೂ ಪ್ರಶ್ನೆ ಇರುವ ಉತ್ತರವಾಗಿ ಇರುತ್ತದೆ. ಆ ವಿವರವನ್ನು ಹೇಳುವುದಕ್ಕೆ ಮೊದಲು ಕರ್ಮ ಜನ್ಮಗಳನ್ನು ಕುರಿತು ಇಷ್ಟು ಉಪೋದ್ಘಾತವನ್ನು ಹೇಳಬೇಕಾಗಿ ಬಂದಿದೆ. ಇಲ್ಲಿಯವರೆಗು C.D ಸಿನಿಮಾವನ್ನು ಕುರಿತು ಹೇಳಿದರೂ ಅದು ಗಿಡ ಮೊದಲಾ ಬೀಜ ಮೊದಲಾ? ಎನ್ನುವ ವಿವರಣೆಗಾಗಿಯೇ ಎಂದು ತಿಳಿಯಬೇಕು. ಕರ್ಮ ಜನ್ಮಗಳನ್ನು ಕುರಿತು ಹೇಳಿದಾಗ ತಿಳುವಳಿಕೆಯುಳ್ಳ ಕೆಲವರಿಗೆ **ಕರ್ಮಮೊದಲಾ? ಜನ್ಮ ಮೊದಲಾ**? ಎನ್ನುವ ಪ್ರಶ್ನೆ ಬರುತ್ತದೆ. ವಾಸ್ತವವಾಗಿ ಬೀಜ ಗಿಡಕ್ಕಿಂತ, ಮೊಟ್ಟೆ ಕೋಳಿಗಿಂತ, C.D ಸಿನಿಮಾಗಿಂತ, ಕರ್ಮ ಜನ್ಮಗಿಂತ ಮೊದಲಾ? ಎನ್ನುವ ಪ್ರಶ್ನೆ ಮನುಷ್ಯರಾದ ನಮಗೆ ಬಹಳ ಹತ್ತಿರವಾಗಿರುವ ಪ್ರಶ್ನೆಯೆಂದು ತಿಳಿಯುತ್ತದೆ. 1) ಗಿಡಮೊದಲಾ ಬೀಜಮೊದಲಾ? 2) ಮೊಟ್ಟೆಮೊದಲಾ ಕೋಳಿಮೊದಲಾ? 3) C.D ಮೊದಲಾ ಸಿನಿಮಾ ಮೊದಲಾ? 4) ಕರ್ಮ ಮೊದಲಾ ಜನ್ಮ ಮೊದಲಾ? ಎನ್ನುವ ಈ ನಾಲ್ಕು ಪ್ರಶ್ನೆಗಳು ಒಂದೇ ಗುಂಪಿಗೆ ಸೇರಿರುವವು ಆಗಿರುವುದರಿಂದ ಇದರಲ್ಲಿ ಒಂದಕ್ಕೆ ಉತ್ತರ ಸರಿಯಾದ ವಿಧವಾಗಿ ತಿಳಿದರೆ ಉಳಿದ ಮೂರು ಪ್ರಶ್ನೆಗಳಿಗೆ ಉತ್ತರ ಸಿಗುತ್ತದೆ.

**ಪ್ರಶ್ನೆ :– ನಾಲ್ಕು ಪ್ರಶ್ನೆಗಳು ಒಂದೇ ವಿಧವಾಗಿ ಇವೆಯೆಂದು ನೀವು ಹೇಳಿದರೂ, ಆ ಮಾತು ವಾಸ್ತವವೇ ಆದರೂ, ಒಂದು ಪ್ರಶ್ನೆಗೆ ವಿವರ ದೊರೆತರೆ ಉಳಿದ ಮೂರು ಪ್ರಶ್ನೆಗಳಿಗೆ ಸರಿಯಾದ ಉತ್ತರ ದೊರೆತಂತೇಯೆಂದು ಹೇಳುತ್ತಿದ್ದೀರ**

**ಇದರಲ್ಲಿ ನಮಗೆ ಅನುಮಾನ ಏನೆಂದರೇ ನೀವು ಒಂದು ಪ್ರಶ್ನೆಗೆ ಉತ್ತರ ಹೇಳಿದರೂ, ಅದನ್ನು ವಿವರವಾಗಿ ಹೇಳಿದರೂ, ಕೊನೆಗೆ ಅದು ಶಾಸ್ತ್ರಬದ್ಧವಾಗಿ ಇರುತ್ತದಾ? ಎಂದು ನಾನು ಪ್ರಶ್ನಿಸುತ್ತಿದ್ದೇನೆ. ಏಕೆಂದರೆ! ಈ ಪ್ರಶ್ನೆಗಳಲ್ಲಿ ಎರಡು ಕಡೆಯಲ್ಲಿಯೂ ಶಾಸ್ತ್ರವಿದೆ. ಎರಡು ಕಡೆಯಲ್ಲಿ ಶಾಸ್ತ್ರಬದ್ಧತೆ ಹೊಂದಿದ ಪ್ರಶ್ನೆಗಳಿಗೆ ಒಂದುಕಡೆ ಸಮಾಧಾನ ಶಾಸ್ತ್ರಬದ್ಧವಾಗಿ ಇದೆಯೆಂದು ಹೇಳುವುದು ತಪ್ಪಾಗುತ್ತದೇನೊ? ಇದಕ್ಕೆ ನೀವು ಏನು ಹೇಳುತ್ತಿರಾ?**

**ಉತ್ತರ :–** ಅನ್ನವು ಶಾಸ್ತ್ರಬದ್ಧವಾದ ಸತ್ಯವೇ, ಹಸಿವೂ ಸಹ ಸತ್ಯವೇ. ಅನ್ನವನ್ನು ತಿಂದಾಗ ಹಸಿವು ಇಲ್ಲದೆ ಹೋಗುವುದು. ಎರಡೂ ಸತ್ಯವಾದಾಗ ಅನ್ನವನ್ನು ತಿಂದರೇ ಹಸಿವು ಎಲ್ಲಿಗೆ ಹೋಗುತ್ತದೆ? ಎಂದು ಪ್ರಶ್ನೆ ಕೇಳುವುದು ಸಮಂಜಸ ಎನಿಸಿಕೊಳ್ಳುವುದಿಲ್ಲ. ಹಾಗೆಯೇ ಒಂದು ಉತ್ತರ ದೊರೆತಾಗ ಎರಡನೇ ಪ್ರಶ್ನೆ ಕೂಡಾ ಸತ್ಯವೇ ಆದಾಗ ಅದು ಇಲ್ಲದಂತೆಹೋಗುತ್ತದೆ ಎನ್ನುವ ಮಾತು ಒಳ್ಳೆಯದಾ! ಎಂದು ಕೇಳಿದಂತಿರುತ್ತದೆ. ಕರ್ಮ, ಜನ್ಮ ಸತ್ಯವೇ ಆದಾಗ ಅದರಲ್ಲಿ ಉತ್ತರವಾಗಿ ಒಂದೇ ಉಳಿಯುತ್ತದೆ. ಹಾಗೆಯೇ ಬೀಜ ಮತ್ತು ಗಿಡ ಎರಡೂ ಸತ್ಯವೇ ಆದಾಗ ಅದರಲ್ಲಿ ಒಂದೇ ಉತ್ತರವಾಗಿ ಉಳಿಯುತ್ತದೆ. ಒಂದು ಪ್ರಶ್ನೆಯಾಗಿ ಉಳಿದರೆ ಮತ್ತೊಂದು ಉತ್ತರವಾಗಿರುತ್ತದೆ. ಏಕೆಂದರೆ! ಪ್ರಪಂಚದಲ್ಲಿ ಪ್ರತಿಯೊಂದು ಉತ್ತರವಿರುವ ಪ್ರಶ್ನೆಯೇ ಇದೆ. ಉತ್ತರವಿಲ್ಲದ ಪ್ರಶ್ನೆ ಯಾವುದೂ ಇಲ್ಲ. ಉತ್ತರ ಇಲ್ಲದ ಪ್ರಶ್ನೆ ಒಂದೇವೊಂದು ಇದೆಯೆಂದು ಮೊದಲೇ ಹೇಳಿಕೊಂಡಿದ್ದೇವೆ. ಅದು ಹೊರತು ಎಲ್ಲಾ ಉತ್ತರವಿರುವ ಪ್ರಶ್ನೆಗಳೇ ಇವೆ. **ಎಲ್ಲಿ ಪ್ರಶ್ನೆಗೆ ಉತ್ತರವಿಲ್ಲವೊ ಅಲ್ಲಿ ಅಜ್ಞಾನವಿದೆಯೆಂದು ಹೇಳಬಹುದು. ಜ್ಞಾನವಿರುವ ಕಡೆ ಪ್ರಶ್ನೆಗೆ ಉತ್ತರ ತಪ್ಪದೆ ಇರುತ್ತದೆ.** ಬೀಜ ಮೊದಲಾ ಗಿಡ ಮೊದಲಾ? ಮೊಟ್ಟೆಮೊದಲಾ ಕೋಳಿ ಮೊದಲಾ? C.D ಮೊದಲಾ ಸಿನಿಮಾ ಮೊದಲಾ? ಕರ್ಮ ಮೊದಲಾ ಜನ್ಮ ಮೊದಲಾ? ಎನ್ನುವ ನಾಲ್ಕು ಪ್ರಶ್ನೆಗಳು ಉತ್ತರವಿಲ್ಲದ ಪ್ರಶ್ನೆಗಳಾಗಿ ಕಾಣಿಸಿದರೂ ಜ್ಞಾನದಿಂದ ಅವುಗಳ ಉತ್ತರಗಳು ಛೇದಿಸಿ ಹೇಳಬಹುದು.

ಪ್ರಸ್ತುತ ಈ ನಾಲ್ಕು ಪ್ರಶ್ನೆಗಳಲ್ಲಿ ಚೆನ್ನಾಗಿ ಅರ್ಥವಾಗುವುದಕ್ಕೆ ಒಂದು ಪ್ರಶ್ನೆಯನ್ನು ತೆಗೆದುಕೊಂಡು ವಿವರಿಸಿಕೊಂಡು ನೋಡೋಣ. ಈ ಒಂದು ಪ್ರಶ್ನೆಗೂ ಉತ್ತರ ಅರ್ಥವಾದರೆ ಉಳಿದ ಮೂರು ಪ್ರಶ್ನೆಗಳಿಗೆ ಸುಲಭವಾಗಿ ಉತ್ತರಗಳು ತಿಳಿಯಬಲ್ಲವು. C.D ಸಿನಿಮಾ ವಿಷಯವನ್ನು ತೆಗೆದುಕೊಂಡು ನೋಡೋಣ. C.D ಯಲ್ಲಿ ಸಿನಿಮಾ ಇರುತ್ತದೆ. ಸಿನಿಮಾ ಮೊದಲು ತಯಾರಾಗಿದ್ದರೆ ಅದನ್ನು C.D ಯಲ್ಲಿ ಬರೆದಿಡಬಹುದೆಂದು ಎಲ್ಲರೂ ಅಂದುಕೊಳ್ಳುತ್ತಾರೆ. ಹಾಗೆಯೇ ಯಾವ ಸಿನಿಮಾವಾದರೂ C.D ಯಲ್ಲಿ ಬರೆದುಕೊಳ್ಳುತ್ತಿದ್ದೇವೆ. ಆದ್ದರಿಂದ ಮೊದಲು ಸಿನಿಮಾ ನಂತರ C.D ಗಳಲ್ಲಿ ನೆಲೆ ಇದೆಯೆಂದು ಹೇಳಬಹುದು. ಒಂದು ಸಿನಿಮಾ ಇದೆಯೆಂದರೆ ಅದನ್ನು ಎಷ್ಟು C.D ಗಳಲ್ಲಾದರೂ ಬರೆದಿಟ್ಟುಕೊಳ್ಳಬಹುದು. ಅಲ್ಲಿಯವರೆಗು ಅದು ಸತ್ಯವೇಯೆಂದು ನಾವೂ ಸಹ ಒಪ್ಪಿಕೊಳ್ಳುತ್ತೇವೆ. ಆದರೆ ಮೊದಲು ಸಿನಿಮಾ ಇದೆಯಾ? ಎಂದು ಪ್ರಶ್ನೆ ಹಾಕಿಕೊಂಡರೆ ಮೊದಲು ಸಿನಿಮಾ ಇಲ್ಲ. ಸಿನಿಮಾವನ್ನು ತಯಾರು ಮಾಡಬೇಕೆಂಬ ಸಂಕಲ್ಪ ಮನುಷ್ಯನಲ್ಲಿ ಬಂದಿರುವುದು ನಡೆದಿದೆ. ನಂತರ ಸ್ವಲ್ಪ ಕಾಲದಲ್ಲಿ ಸಿನಿಮಾ ತಯಾರು ಮಾಡಲ್ಪಟ್ಟಿದೆ. ಸಿನಿಮಾ ಒಂದೇಸಲವಾಗಲಿ, ಒಂದು ಗಂಟೆಯಲ್ಲಾಗಲಿ ತಯಾರಾಗಲಿಲ್ಲ. ಸಿನಿಮಾದಲ್ಲಿನ ಅನೇಕ ಸಂಘಟನೆಗಳನ್ನು ಅನೇಕ ಭಾಗಗಳಾಗಿ, ಅನೇಕ ದಿನಗಳು ಶ್ರಮವಹಿಸಿ ತಯಾರು ಮಾಡುವುದು ನಡೆಯುತ್ತಿದೆ. ಒಂದು ದಿನ ಕೆಲವು ಗಂಟೆಗಳು ಶ್ರಮಿಸಿದರೆ ಒಂದು ಹತ್ತು ಅಥವಾ ಹದಿನೈದು ನಿಮಿಷಗಳ ಸಿನಿಮಾ ಮಾತ್ರ ತಯಾರಾಗುತ್ತದೆ. ಹಾಗೆ ತಯಾರು ಮಾಡಿರುವುದನ್ನು ಒಂದು ಭಾಗವಾಗಿ ಫಿಲ್ಮುನಲ್ಲಾಗಲಿ ಅಥವಾ ಕೆಮರಾ ಚಿಪ್‌ನಲ್ಲಿ ಆಗಲಿ ರಿಕಾರ್ಡ್ ಮಾಡಲಾಗುತ್ತದೆ. ಸಿನಿಮಾ ಪೂರ್ತಿಯಾಗಿ ತಯಾರಾಗದ ಮುನ್ನವೇ C.D ಯಲ್ಲಾಗಲಿ C.D ಅಂತಹ ಪರಿಕರದಲ್ಲಾದರೂ ನೆಲೆ ಮಾಡಲಾಗುತ್ತಿದೆ.

ಈ ವಿಧವಾಗಿ ಅನೇಕ ಭಾಗಗಳಾಗಿ ಒಂದು ಸಿನಿಮಾದಲ್ಲಿನ ಅನೇಕ ಸಂಘಟಣೆಗಳು, ಅನೇಕ ದಿನಗಳು ಕೆಮೆರಾದಲ್ಲಾದರೂ ಮತ್ತು ಇತರೆ

ಪರಿಕರದಲ್ಲಾದರೂ ನೆಲೆ ಮಾಡಲಾಗುತ್ತದೆ. ಈಗಿನ ಕಾಲದಲ್ಲಿ ಚಿಕ್ಕ ಭಾಗವಾಗಿರುವ ಚಿಪ್ ಎನ್ನುವುದರಲ್ಲಿ ಚಲಚಿತ್ರವಾಗಿ ತಯಾರು ಮಾಡಲಾದ ಭಾಗಗಳೆಲ್ಲ ಇರುತ್ತವೆ. ನಂಬರ್ ಪ್ರಕಾರವಾಗಿ ಒಂದೇ ಕ್ರಮದಲ್ಲಿ ನೆಲೆ ಇಟ್ಟಿರುವ ಭಾಗಗಳೆಲ್ಲವನ್ನು ಚಲನಚಿತ್ರವೆಲ್ಲಾ ತಯಾರಾದ ನಂತರ ಒಂದುಸಲ ಪ್ರದರ್ಶಿಸಿ ಅನೇಕ ಚಿತ್ರಗಳಾಗಿ C.D ಗಳಲ್ಲಾಗಲಿ, C.D ಯಂತಹ ಪರಿಕರಗಳಲ್ಲಾಗಲಿ ಬರೆಯುವುದು ಅಥವಾ ದಾಖಲಾತಿ (ರಿಕಾರ್ಡ್) ಮಾಡಿಡುವುದು ನಡೆಯುತ್ತಿದೆ. ಹಾಗೆ ತಯಾರು ಮಾಡಿದ ಸಿನಿಮಾಗಳನ್ನು ಅನೇಕ ಕಡೆಯಲ್ಲಿ, ಅನೇಕಜನ, ಅನೇಕ C.D ಗಳಿಂದ ನೋಡುತ್ತಿದ್ದಾರೆ. ಚಿತ್ರವನ್ನು ಒಂದುಸಲ ನೋಡಿದಂತೆ ಅದು ಒಂದೇ ಸಲ ತಯಾರಾಗಲಿಲ್ಲ. ಆದ್ದರಿಂದ ಮೊದಲು ಸಿನಿಮಾ ಇಲ್ಲವೆಂದು ಹೇಳಬಹುದು. ಸಿನಿಮಾ ಭಾಗಗಳಿವೆ, ಸಿನಿಮಾ ಭಾಗಗಳು ಸಿನಿಮಾ ಎಂದು ಅನಿಸಿಕೊಳ್ಳುವುದಿಲ್ಲ. ಭಾಗಗಳೆಲ್ಲವನ್ನು ತನ್ನಲ್ಲಿ ಒಳಗೊಂಡಿರುವ C.D ಯಾಗಲಿ, ಚಿಪ್ ಆಗಲಿ ಒಂದುಸಲ ಸಿನಿಮಾ ಭಾಗಗಳೆಲ್ಲವನ್ನು ಸೇರಿಸಿ ಪ್ರದರ್ಶಿಸುವಾಗ ಅದು ಸಿನಿಮಾ ಆಗುತ್ತಿದೆ. ಸಿನಿಮಾವನ್ನು ತಯಾರು ಮಾಡಿದಾಗ ತಯಾರು ಮಾಡುವವರು ಅನುಕೂಲವನ್ನು ಅನುಸರಿಸಿ ಸಿನಿಮಾ ಕಥೆಯಲ್ಲಿನ ಕೊನೆಯ ಭಾಗವನ್ನು ಮೊದಲು, ಮೊದಲ ಭಾಗವನ್ನು ಕೊನೆಯಲ್ಲಿಯೂ ಹೇಗಂದರೇ ಹಾಗೆ ತಯಾರು ಮಾಡಿರುತ್ತಾರೆ. ಕಥೆಯನ್ನು ಕ್ರಮವಾಗಿ ಸಹ ತಯಾರು ಮಾಡಿರುವುದಿಲ್ಲ. ತಯಾರು ಮಾಡಿದ ಪ್ರತಿಯೊಂದು ಭಾಗ ಒಂದು ನಂಬರ್‌ನಿಂದ ಗುರುತಿಸಲ್ಪಟ್ಟಿರುತ್ತದೆ. ಕೊನೆಯಲ್ಲಿ ಎಲ್ಲಾ ಭಾಗಗಳನ್ನು ಸೇರಿಸಿಕೊಂಡು ರಿಕಾರ್ಡ್ ಮಾಡಿದ ಪರಿಕರಗಳಿಂದ ಮೊದಲ ಸಿನಿಮಾ ತಯಾರಾಗಿ ಹೊರಗೆ ಬರುತ್ತಿದೆ. ಸಿನಿಮಾಗಿಂತ ಮೊದಲು ಅದನ್ನು ಬಚ್ಚಿಟ್ಟುಕೊಂಡ ಪರಿಕರವೇ ಮುಂದಿದೆ. ಸಿನಿಮಾ ಭಾಗಗಳನ್ನು ಬಚ್ಚಿಟ್ಟುಕೊಂಡ C.D ಯಂತಹ ಪರಿಕರದಿಂದ ಮೊದಲು ಸಿನಿಮಾ ಹೊರಗೆ ಬರುತ್ತಿದೆ. ಆದ್ದರಿಂದ C.D ಯಂತಹ ಪರಿಕರವಾಗಲಿ, C.D ಯಾಗಲಿ ಮೊದಲಿನದೆಂದು ನಂತರ, ಸಿನಿಮಾ ಎಂದು ಹೇಳಬಹುದು. ಒಂದುಸಲ ರಿಕಾರ್ಡ್ ಮಾಡಲಾದ

ಪರಿಕರದ ಮುಖಾಂತರ ಸಿನಿಮಾ ಹೊರಗೆ ಬಂದರೆ ಅದನ್ನು ನೇರವಾಗಿ ಮೊತ್ತವು ಸಿನಿಮಾವನ್ನು ಎಷ್ಟು ಕಾಪಿಗಳನ್ನಾದರೂ ಎಷ್ಟು ಸಿ.ಡಿಗಳಲ್ಲಾದರೂ ಬರೆಯಬಹುದು. ಮೊದಲು ನೇರವಾಗಿ ಸಿನಿಮಾ ತಯಾರಾಗಿ ರಿಕಾರ್ಡ್ ಆಗಲಿಲ್ಲ. ರಿಕಾರ್ಡ್‌ನಿಂದ ಮೊದಲ ಸಿನಿಮಾವನ್ನು ಹೊರಗೆ ತೆಗೆಯುವುದು ನಡೆಯುತ್ತಿದೆ. ಆದ್ದರಿಂದ ಇಲ್ಲಿ C.D (ಸಿ,ಡಿ) ಮೊದಲಾ ಸಿನಿಮಾ ಮೊದಲಾ? ಎನ್ನುವ ಪ್ರಶ್ನೆಗೆ ಉತ್ತರವಾಗಿ ಸಿಡಿಯೇ ಮೊದಲೆಂದು ಹೇಳಬಹುದು. ಎಲ್ಲಿಯಾದರೂ ರಿಕಾರ್ಡ್ ಪರಿಕರವೇ ಮೊದಲು ಆದ್ದರಿಂದ ಆ ವಿಧವಾಗಿ ಉತ್ತರವನ್ನು ಹೇಳದೆ ತಪ್ಪುವುದಿಲ್ಲ.

**ಪ್ರಶ್ನೆ :– C.D (ಸಿ.ಡಿ) ಸಿನಿಮಾವನ್ನು ಕುರಿತು ನೀವು ಹೇಳಿರುವುದು ಸತ್ಯವೇ ಆದರೂ ಏನೊ ಮಾಯೆ ಮಾಡಿ ಹೇಳಿದಂತಿದೆ. ಈ ವಿಷಯದಲ್ಲಿ ಸ್ವಲ್ಪ ಅರ್ಥವಾದಂತೆ, ಸ್ವಲ್ಪ ಅರ್ಥವಾಗದಂತೆ ಇದೆ. ಈ ವಿಧಾನ ನಮಗೆ ಬೇಡ ಆದರೆ, ಗಿಡ ಮೊದಲಾ? ಬೀಜ ಮೊದಲಾ? ಎಂಬ ಪ್ರಶ್ನೆಗೆ ನೇರವಾಗಿ ಉತ್ತರವನ್ನು ವಿಶಧೀಕರಿಸಿ ಹೇಳಿರೆಂದು ಕೇಳುತ್ತಿದ್ದೇವೆ. ನಮಗೆ ಗಿಡ ಬೀಜದ ವಿಷಯವನ್ನು ಕುರಿತು ತಿಳಿದುಕೊಳ್ಳಬೇಕೆಂದು ಇದೆ. ನಾವು ಮೊದಲು ಕೇಳಿದ ಪ್ರಶ್ನೆ ಅದೇ. ನಂತರ ನೀವು ಮೊಟ್ಟೆ ಮೊದಲಾ ಕೋಳಿ ಮೊದಲಾ?, ಕರ್ಮ ಮೊದಲಾ ಜನ್ಮ ಮೊದಲಾ? ಎನ್ನುವ ಪ್ರಶ್ನೆಗಳನ್ನು ತಂದಿದ್ದಾರೆ. ಮೊದಲು ನಾವು ಕೇಳಿರುವುದಕ್ಕೆ ಸಮಾಧಾನ ಹೇಳಿರಿ. ನಂತರ ಉಳಿದ ಎರಡು ಸುಲಭವಾಗಿ ಅರ್ಥವಾಗುತ್ತವೆ. ಗಿಡ ಮೊದಲಾ ಬೀಜ ಮೊದಲಾ? ಎನ್ನುವ ಪ್ರಶ್ನೆ ಪ್ರಪಂಚವೆಲ್ಲಾ ಉತ್ತರವಿಲ್ಲದ ಪ್ರಶ್ನೆಯಾಗಿ ಕಾಣಿಸುತ್ತಿದೆ. ಆದ್ದರಿಂದ ಅದನ್ನೇ ಹೇಳಿರಿ.**

**ಉತ್ತರ :–** "ಗಿಡವಾಗಿ ಬಗ್ಗದ್ದು ಮರವಾದಾಗ ಬಗ್ಗೀತೆ!" ಎಂದು ಕೆಲವರು ಹೇಳುವುದನ್ನು ಕೇಳಿದ್ದೇವೆ. ಇದೇ ಮಾತನ್ನೇ ಮತ್ತೊಂದು ಪ್ರಾಂತದಲ್ಲಿ ಸ್ವಲ್ಪ ವ್ಯತ್ಯಾಸದಿಂದ "ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ!" ಎಂದೂ ಸಹ ಹೇಳುತ್ತಾರೆ. "ಚಿಕ್ಕ ಮಗುವಾಗಿರುವಾಗಲೇ ಮಾತು ಕೇಳದಿರುವಾಗ ದೊಡ್ಡದಾದ ನಂತರ ಮಾತು ಕೇಳುವನಾ!" ಎನ್ನುವ ಮಾತಿಗಾಗಿ ಅದೇ ಸಂದರ್ಭದಲ್ಲಿ

'ಗಿಡ', 'ಮರ' ಎನ್ನುವ ಮಾತುಗಳನ್ನು ಬಳಸುತ್ತಾರೆ. ಈ ಮಾತುಗಳ ಸಂದರ್ಭವಾಗಿ 'ಗಿಡ' ಎಂದರೇ ಚಿಕ್ಕದೆಂದು, 'ಮರ' ಎಂದರೆ ವೃಕ್ಷ ಎಂದೂ ಅರ್ಥವಾಗುತ್ತದೆ. ಗಿಡ ಎಂದರೇ ಸಸಿಯ ದಸೆಯಲ್ಲಿ ಇರುವುದೆಂದೂ, 'ಮರ' ಎಂದರೇ ವೃಕ್ಷ ದಶೆಯಲ್ಲಿ ಇರುವುದು ಎಂದೂ ತಿಳಿಯುತ್ತಿದೆ. ಒಂದು ಗಿಡ ಒಂದು ಬೀಜದಿಂದ ಹುಟ್ಟುತ್ತಿದೆಯೆಂದು ಎಲ್ಲರಿಗೂ ತಿಳಿದಿದೆ. ಬೀಜದಿಂದ ಹುಟ್ಟಿದ ಗಿಡ ಸ್ವಲ್ಪ ಕಾಲದಿಂದ ಬೆಳೆದು ಕೆಲವು ವರ್ಷಗಳಿಗೆ ವೃಕ್ಷವಾಗಿ ಬದಲಾಗುತ್ತಿದೆ. 'ಗಿಡ' ವೃಕ್ಷದಶೆಗೆ ಬದಲಾದ ನಂತರ, ಅಂದರೆ ಸ್ವಲ್ಪ ವಯಸ್ಸು ಬಂದ ನಂತರ, 'ಮರ (ವೃಕ್ಷ) ಎನಿಸಿಕೊಂಡ ನಂತರ, ಆ ಮರಕ್ಕೆ ಮೊದಲು ಹೂಗಳು ಬಿಡುತ್ತದೆ. ಹೂಗಳು ಸ್ವಪರಾಗ ಸಂಪರ್ಕ ಮುಖಾಂತರವಾಗಲಿ, ಪರಾಗಸಂಪರ್ಕ ಮುಖಾಂತರವಾಗಲಿ, ಪರ ಪರಾಗಸಂಪರ್ಕದ ಮೂಲಕವಾಗಲಿ ಫಲದೀಕರಣ ಹೊಂದಿ ಹೂವು ಕಾಯಿಯಾಗಿ ಬದಲಾಗುತ್ತದೆ. ಹೂವು ಕಾಯಿಯಾಗಿ ಬದಲಾಗುವುದಕ್ಕೆ ಕೆಲವು ದಿನಗಳು ಹಿಡಿಸುತ್ತದೆ. ಹೂವು ಕಾಯಾಗಿ ಬದಲಾದ ನಂತರ ಕೆಲವು ದಿನಗಳಿಗೆ ಕಾಯಿ ಪೂರ್ತಿಯಾಗಿ ಬೆಳೆದು ಪರಿಪಕ್ವಕ್ಕೆ ಬಂದು ಕಾಯಿ ಹಣ್ಣಾಗಿ ಬದಲಾಗುತ್ತದೆ. ಆಗ ಕಾಯಲ್ಲಿ ಸ್ವಲ್ಪ ತಯಾರಾದ ಬೀಜಗಳು ಹಣ್ಣಿನಲ್ಲಿ ಪೂರ್ತಿಯಾಗಿ ಬೆಳೆಯುತ್ತದೆ. ಹಣ್ಣು ಪೂರ್ತಿಯಾಗಿ ಬೆಳೆದು ಉದುರಿಹೋದ ನಂತರ ಬೀಜಗಳು ಪೂರ್ತಿ ಸ್ಥಾಯಿಗೆ ತಯಾರಾಗಿ ರುತ್ತವೆ. ಉದುರಿಹೋದ ಅಥವಾ ಹಣ್ಣಾಗಿರುವ ಹಣ್ಣಿನಲ್ಲಿ ಬೀಜಗಳು ತಯಾರಾಗಿ ಹೊರಬೀಳುತ್ತವೆ. ಹಣ್ಣಿನಿಂದ ಹೊರಬಿದ್ದು ಪೂರ್ತಿಯಾಗಿ ತೇವ ಆರಿಹೋದ ನಂತರ ಬೀಜ ಪೂರ್ತಿ ತಯಾರಾದಂತೆ ತಿಳಿಯಬೇಕು. ಒಂದು ಗಿಡದಿಂದ ತಯಾರಾದ ಬೀಜಗಳು ಆ ಗಿಡಕ್ಕೆ ಸಂಬಂಧಿಸಿದ ರಸಾಯನಗಳು ತುಂಬಿಡ ಲಾಗುತ್ತವೆ. ಗಿಡವೊಂದರ ರಸಾಯನಗಳೇ ಅಲ್ಲದೆ ಬೀಜ ಗಿಡವಾಗಿ ಬದಲಾದರೂ, ಗಿಡ ಕೆಲವು ದಿನಗಳವರೆಗು ಅಥವಾ ಕೆಲವು ಗಂಟೆಗಳವರೆಗು ಆಹಾರವನ್ನು ಸಂಪಾದಿಸಿಕೊಳ್ಳದ ಸ್ಥಿತಿಯಲ್ಲಿ ಇರುತ್ತದೆ. ಆದ್ದರಿಂದ ಬೀಜ ಸಸಿಯಾಗಿ ಹುಟ್ಟಿದಾಗ ಅದಕ್ಕೆ ಬೇಕಾದ ಆಹಾರವನ್ನು ಬೀಜದಿಂದಲೇ ಲಭಿಸುತ್ತದೆ. ಬೀಜ ಸಸಿಯಾಗಿ ಬದಲಾವಣೆ ಹೊಂದಿದಾಗ ಎರಡು ಮೂರು

ದಿನಗಳವರೆಗು ಆ ಗಿಡಕ್ಕೆ ಬೇಕಾದ ಆಹಾರ ಬೀಜದಲ್ಲಿ ನೆಲೆ ಇರುವುದೇ ಉಪಯೋಗವಾಗುತ್ತದೆ.

ಇನ್ನೂ ವಿವರವಾಗಿ ಹೇಳಿಕೊಂಡರೆ ಬೀಜದಲ್ಲಿ ಬಲ ಎಡವಾಗಿ ಎರಡು ಬೇಳೆಗಳಿರುತ್ತವೆ. ತೊಗರಿ ಕಾಳಿನಲ್ಲಾದರೂ, ಕಡ್ಲೆ ಕಾಳಿನಲ್ಲಾದರೂ, ಶೇಂಗದ ಬೀಜದಲ್ಲಾದರೂ, ಹುರುಳಿ ಬೀಜದಲ್ಲಾದರೂ ಹೀಗೆ ಅನೇಕ ಬೀಜಗಳು ಎರಡು ಬೇಳೆಗಳು ಹೊಂದಿರುವವು ಇವೆ. ಕೆಲವು ದ್ವಿದಳ ಬೀಜಗಳಾಗಿದ್ದು ಕೆಲವು ಏಕದಳ ಬೀಜಗಳಾಗಿ ಇವೆ. ಬತ್ತದ ಕಾಳು, ನೆವಣಕ್ಕಿ, ಜೋಳದ ಕಾಳು ಮೊದಲಾದವು ಏಕದಳ ಬೀಜಗಳಾಗಿ ಇವೆ. ಈಗ ನಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ಶೇಂಗಾಬೀಜವನ್ನು ತೆಗೆದುಕೊಂಡು ನೋಡಿದರೆ. **ಕಾಳು** ಎಂದರೂ **ಬೀಜ (ಕಾಳು)** ಎಂದರೂ, **ಬೀಜವು** ಎಂದರೂ ಎಲ್ಲಾ ತೆಲುಗು ಭಾಷೆಯಲ್ಲಿ ಅರ್ಥ ಸಹಿತವಾದ ಹೆಸರುಗಳೆಂದೇ ತಿಳಿಯಬೇಕು. ಈದಿನ ಇಂಗ್ಲೀಷ್ ಮೀಡಿಯಂ ಓದುತ್ತಿರುವ ಕನ್ನಡದವರಿಗೂ ಸಹ ಕನ್ನಡದಲ್ಲಿ ಹೆಸರುಗಳು ತಿಳಿಯದಿರುವುದು ದೊಡ್ಡ ಲೋಪವಾಗಿ ಹೇಳಬಹುದು. **ಎಲ್ಲಾ ಭಾಷೆಗಳಿಗು ತೆಲುಗು ಭಾಷೆ ತಾಯಿ ಯಂಥದ್ದು**. ತೆಲುಗು ಭಾಷೆಯಲ್ಲಿನ ಬಹಳ ಪದಗಳು ಇತರ ಭಾಷೆಗಳಾಗಿ ಹೇಳಲ್ಪಡುತ್ತಿವೆಯೆಂದು ತೆಲುಗಿನವರಿಗೆ ತಿಳಿಯದೇ ಇರುವುದಲ್ಲದೆ. ಬೆಲ್ಲದ ಕಬ್ಬನ್ನು ಬಿಟ್ಟು ಜೋಳದಂಟನ್ನು ಅಗೆದಹಾಗೆ ಎಷ್ಟೋ ರುಚಿ ಇರುವ ತೆಲುಗು ಭಾಷೆಯನ್ನು ಬಿಟ್ಟು ರುಚಿಯಿಲ್ಲದ ಇತರ ಭಾಷಗಳೆಹಿಂದೆ ತೆಲುಗಿನವರು ಹೋಗುವುದು ಜೇನನ್ನು ಬಿಟ್ಟು ಪಾನಕವನ್ನು ಕುಡಿದಂತೆ ಇದೆ.

ತೆಲುಗು ಭಾಷೆಯಲ್ಲಿ **'ಗಿಂಜ' (ಕಾಳು)** ಎಂದರೆ ಗಿಂಜಿ (ಎಳೆ) ಕೊಂಡು ಹುಟ್ಟಿರುವುದೆಂದು ಅರ್ಥ ಇದೆ. ಗಿಂಜುಕೊಂಡು ಎಂದರೇ ಎಳೆದುಕೊಂಡು ಎಂದು ಅರ್ಥ. ಎಳೆದುಕೊಳ್ಳುವುದು ಎಂಬ ಮಾತನ್ನು ಕೆಲವು ಪ್ರಾಂತ್ಯಗಳಲ್ಲಿ 'ಸೆಳೆದುಕೊಂಡು' ಎನ್ನುತ್ತಿರುವಾಗ, ಕೆಲವು ಪ್ರಾಂತ್ಯಗಳಲ್ಲಿ 'ಎಳೆದುಕೊಂಡು' ಎಂದು ಎನ್ನುತ್ತಿದ್ದಾರೆ. ಬೀಜದಿಂದ ಹೊರಗೆ ಬರುವ ಸಸಿಯ ಮೇಲ್ಭಾಗವನ್ನು ಯಾರೋ ಹಿಡಿದು ಎಳೆದಹಾಗೆ ಬೀಜದಿಂದ ಭೂಮಿಯೊಂದರ ಮೇಲ್ಭಾಗಕ್ಕೆ

ಬರುತ್ತಿರುವಾಗ, ಅಷ್ಟೇ ಬಲವಾಗಿ ಸಸಿಯೊಂದರ ಎರಡನೆ ಕೊನೆಯಾದ ಬೇರು ಭಾಗದ ಕೆಳಗೆ ಭೂಮಿಯೊಳಗೆ ಹೋಗುತ್ತಿದೆ. ಅಲ್ಲಿ ಯಾವ ಶಕ್ತಿ ಉಪಯೋಗಪಡುತ್ತಿದೆಯೋ ಯಾರಿಗೂ ತಿಳಿದಿಲ್ಲ ಆದರೆ ಎಳೆದಹಾಗೆ ಬೀಜದಿಂದ ಹೊರಗೆ ಗಿಡ ಬರುತ್ತಿದೆ ಆದ್ದರಿಂದ ಬೀಜವನ್ನು 'ಗಿಂಜ' (ಕಾಳು) ಎಂದು ಕರೆದಿದ್ದಾರೆ. **"ಜ"** ಎಂದರೇ ಹುಟ್ಟುವುದೆಂದು ಅರ್ಥವಿರುವಾಗ, **ಗಿಂ** ಅಥವಾ **ಗುಂ** ಎಂದರೆ 'ಬಲವಾಗಿ' ಎಂದು ಅರ್ಥ. ಬಲವಾಗಿ ಸಸಿಯ ತುದಿಯ ಮೇಲ್ಭಾಗವು ಹೊರಗೆ, ಬಲವಾಗಿ ಸಸಿಯ ಕೆಳಗಿನ ಭಾಗ ಭೂಮಿಯೊಳಗೆ ಬೀಜದಿಂದ ಬರುವುದರಿಂದ **"ಕಾಳು"** (ಗಿಂಜ) ಎಂದು ಸ್ವಲ್ಪಜನ ಕರೆಯುತ್ತಿದ್ದಾರೆ. ತಾಳೆಕಾಯಿಗಳಿಂದ ಹೊರಗೆ ತೆಗೆಯುವ ತಾಳೆಕಾಯನ್ನು ಕೆಲವರು **"ತಾಟಿಗುಂಜಲು"** ಎಂದು ಕರೆಯುತ್ತಿರುವುದು ನಾವು ಕೇಳಿಯೇ ಇರುತ್ತೇವೆ. ಹಾಗೆಯೇ ಕೆಲವರು ಕೆಲವು ಪ್ರಾಂತಗಳಲ್ಲಿ ತಾಟಿಗಿಂಜಲು ಎಂದು ಕೂಡಾ ಹೇಳುವುದು ಕೇಳಿರುತ್ತೇವೆ. ಬೀಜವನ್ನು 'ಕಾಳು' (ಗಿಂಜ) ಎನ್ನುವುದೇ ಹೆಚ್ಚಾಗಿದೆ. ತಾಳೆಕಾಯಿ ಹತ್ತಿರ ಮಾತ್ರ ತಾಟಿ ಗುಂಜಗಳೆಂದು ಕೆಲವರನ್ನುವುದು ಕೇಳುತ್ತಿದ್ದೇವೆ. ಇದನ್ನನುಸರಿಸಿ 'ಗಿಂಜ' ಎಂದರೆ ಬಲವಾಗಿ ಹೊರಗೆ ತಳ್ಳುವುದು. ಬೀಜದಿಂದ ಸಸಿಯ ಕೊನೆ ಹೊರಗೆ ಬೀಳುವುದನ್ನು ನೋಡಿದರೆ ಯಾವುದೋ ಶಕ್ತಿ ಹೊರಗೆ ತಳ್ಳಿದಂತಿರುವುದರಿಂದ ಹೊರಗೆ ಎಳೆದು (ಗುಂಜಿ) ಹಾಕುವುದು ಕಾಳು (ಗಿಂಜ) ಎಂದು ಹೇಳಬಹುದು.

ಕಾಳಿಗೆ ಮತ್ತೊಂದು ಹೆಸರು **"ಬೀಜ"** ಎಂದು ಇದೆ. 'ಬೀಜ' ಎನ್ನುವ ಪದದಲ್ಲಿ ಬೀ ಜ ಎಂಬ ಎರಡು ಅಕ್ಷರಗಳೇ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿನ ಗುಣತ್ರಯ ವಿಭಾಗಯೋಗವೆಂಬ ಅಧ್ಯಾಯದಲ್ಲಿ ನಾಲ್ಕನೇ ಶ್ಲೋಕದಲ್ಲಿ ಬರೆಯಲ್ಪಟ್ಟಿದೆ. **"ಅಹಂ ಬೀಜ ಪ್ರದಃ ಪಿತಾ"** ಎಂದು ಶ್ಲೋಕದಲ್ಲಿ ಹೇಳಲ್ಪಟ್ಟಿದೆ. "ಬೀಜ" ಎಂಬಮಾತು ಸಂಸ್ಕೃತ ಶ್ಲೋಕದಲ್ಲಿ ಇರುವುದರಿಂದ ಈ ಮಾತು ಸಂಸ್ಕೃತ ಭಾಷೆಯಲ್ಲಿನದೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ನಾವು ಮೊದಲಿನಲ್ಲಿಯೇ "ಬೀಜಂ" ಎಂಬ ಪದ ತೆಲುಗು ಭಾಷೆಯಲ್ಲಿನದೆಂದು ಹೇಳಿದ್ದೇವೆ. ಪ್ರಪಂಚದಲ್ಲಿಯೇ ಮೊದಲು ಹುಟ್ಟಿದ ಭಾಷೆ

ತೆಲುಗು ಭಾಷೆಯೆಂದು, ತೆಲುಗು ಪದಗಳೇ ನಂತರ ಅನೇಕ ಭಾಷೆಗಳಲ್ಲಿ ಸೇರಿಹೋಗಿವೆಯೆಂದು ಹೇಳಿದ್ದೇವೆ. ಆದರೆ ಅವು ಎಲ್ಲಿದ್ದರೂ ತೆಲುಗು ಪದಗಳೇ. ಉಳಿದ ಭಾಷೆಗಳಲ್ಲಿ ಅವುಗಳಿಗೆ ಸರಿಯಾದ ಅರ್ಥವಿಲ್ಲ. ತೆಲುಗು ಭಾಷೆ ಯಲ್ಲಿಯೇ ಆ ಪದಗಳಿಗೆ ಸರಿಯಾದ ಅರ್ಥವಿದೆ. 'ಬೀಜಂ' ಎನ್ನುವ ಪದದಲ್ಲಿ ಬೀಜ ಎನ್ನುವ ಎರಡು ಅಕ್ಷರಗಳೇ ಅರ್ಥದಿಂದ ಕೂಡಿಕೊಂಡಿವೆ. ಬೀ ಜ ಎನ್ನುವ ಎರಡು ಅಕ್ಷರಗಳಲ್ಲಿ 'ಜ' ಎಂದರೆ ಹುಟ್ಟುವುದೆಂದು ಅರ್ಥವಿದೆ. 'ಬೀ' ಎಂದರೆ ನಡೆಯುವುದನ್ನು ತಿಳಿಸುವುದು 'ಬೀಜ' ಅಂದರೇ "ಹುಟ್ಟುವಂಥದ್ದು" ಎಂದು ಅರ್ಥ ಅಥವಾ 'ಜನ್ಮಿಸುವುದೆಂದು' ಹೇಳಬಹುದು. 'ಬೀ' ಎಂದರೆ ಭವಿಷ್ಯತ್ತನ್ನು ತಿಳಿಸುವುದೆಂದು ತೆಲುಗು ಭಾಷೆಯಲ್ಲಿ ಅರ್ಥವಿರುವಾಗ ಇದೇ 'ಬೀ' ಇಂಗ್ಲೀಷ್ ಭಾಷೆಯಲ್ಲಿ ಸೇರಿಹೋಗಿ ಅಲ್ಲಿಯೂ ಸಹ ತೆಲುಗು ಭಾಷೆಯಲ್ಲಿನ ಅರ್ಥವನ್ನೇ ತಿಳಿಸುತ್ತಿದೆ.

'ಗಿಂಜ', 'ಬೀಜ' ಎನ್ನುವ ಎರಡು ಪದಗಳಿಗೆ ತೆಲುಗು ಭಾಷೆಯಲ್ಲಿಯೇ ಅರ್ಥವನ್ನು ತಿಳಿದುಕೊಂಡಿದ್ದೇವೆ. **'ವಿತ್ತನಮು'** ಎನ್ನುವ ಮತ್ತೊಂದು ಹೆಸರಿಗಿರುವ ಅರ್ಥವನ್ನು ತಿಳಿದುಕೊಳ್ಳೋಣ. 'ವಿತ್ತನಮು' ಪದದಲ್ಲಿ ನಾಲ್ಕು ಅಕ್ಷರಗಳಲ್ಲಿ ಕೊನೆಯ ಅಕ್ಷರ ಮುಕ್ತಾಯದ ಅಕ್ಷರವಾಗಿ ಇರುವುದರಿಂದ ಅದಕ್ಕೆ ಅರ್ಥ ಇರುವುದಿಲ್ಲ. ಕೊನೆಯ ಅಕ್ಷರ "ಮು" ಹೊರಗೆ ಹೋದರೆ ಉಳಿದಿರುವ ಮೂರು ಅಕ್ಷರಗಳಿಗು ಅರ್ಥವಿದೆ. **"ದ್ರಾವಿಡ ಬ್ರಾಹ್ಮಣ"** ಗ್ರಂಥದಲ್ಲಿ ಎರಡು ಗುಡಿಸುಗಳು ಇರುವ **"ವಿ"** ಆತ್ಮಗೆ ಗುರುತಾಗಿ ಇದೆಯೆಂದು ಹೇಳಿ ಕೊಂಡಿದ್ದೇವೆ. ಈಗಲೂ ಸಹ ಅದೇ ಅರ್ಥವನ್ನು 'ವಿ' ಹೊಂದಿದೆಯೆಂದು ಹೇಳುತ್ತಿದ್ದೇವೆ. ಎರಡನೆ ಅಕ್ಷರವಾದ **"ತ್ತ"** ಎಂಬ ಅಕ್ಷರ ಇಲ್ಲಿ ಜೀವಾತ್ಮ ಭಾವವನ್ನು ತಿಳಿಸುತ್ತಿದೆ. ಇದರಪ್ರಕಾರ 'ವಿತ್ತ' ಎನ್ನುವ ಎರಡು ಅಕ್ಷರಗಳಿಗೆ ಆತ್ಮ, ಜೀವಾತ್ಮಯೆಂದು ಅರ್ಥ. ಮೂರನೆ ಅಕ್ಷರವಾದ "ನ" ಎಂದರೆ ಅಲ್ಲ, ಇಲ್ಲ ಎಂದು ಅರ್ಥ ಇದೆ. "ವಿತ್ತನ" ಎಂದರೆ ಆತ್ಮ, ಜೀವಾತ್ಮ ಎರಡೂ ಇಲ್ಲದಿರುವುದೆಂದು ಅರ್ಥ. ವಿತ್ತನದಲ್ಲಿರುವ ಅರ್ಥದ ಪ್ರಕಾರ ಪರಮಾತ್ಮ

ಮಾತ್ರ ಇರುವಾಗ ಆತ್ಮ, ಜೀವಾತ್ಮ ಎರಡು ಇಲ್ಲದಿರುವುದು ವಿತ್ತನವೆಂದು ಹೇಳಬಹುದು. ಎರಡು ಇಲ್ಲ ಎಂದರೆ ಎರಡು ಸೇರುತ್ತವೆಯೆಂದು ಅರ್ಥ. ಸಜೀವವಾದ ಯಾವುದರಲ್ಲೇ ಆದರೂ ಮೂರು ಆತ್ಮಗಳು ಇರಬೇಕು. ಪ್ರಸ್ತುತ ಜೀವವಿಲ್ಲದ ಬೀಜದಲ್ಲಿ ಆತ್ಮ, ಜೀವಾತ್ಮ ಎರಡೂ ಇಲ್ಲವೆಂದು, ನಂತರ ಆ ಎರಡು ಬರುತ್ತವೆಯೆಂದು, ವಿತ್ತನ ಗಿಡವಾಗಿ ಸಜೀವವಾಗುತ್ತದೆಂದು ಅರ್ಥವನ್ನು ಬೀಜ ತಿಳಿಸುತ್ತಿದೆ. ಬೀಜ ಎಂಬ ಪದದಲ್ಲಿ ಆತ್ಮ, ಜೀವಾತ್ಮಗಳು ಈಗ ಇಲ್ಲವೆಂದು ಹೇಳುತ್ತಾ ಎರಡೂ ಬರಬಹುದೆಂಬ ಸೂಚನೆಯನ್ನು ತಿಳಿಸುತ್ತಿವೆ. ಈ ವಿಧವಾಗಿ **ಗಿಂಜ, ಬೀಜ, ವಿತ್ತನಮು** (ಬೀಜ) ಎಂಬ ಮೂರು ಪದಗಳಿಗು ಅರ್ಥವಿದೆ.

**ಪ್ರಶ್ನೆ :– ಗಿಡ ಮೊದಲಾ ಬೀಜ ಮೊದಲಾ? ಎನ್ನುವ ಪ್ರಶ್ನೆಗೆ ನೀವು ಅಸಂಪೂರ್ಣ ವಾದ ಸಮಾಧಾನವನ್ನು ಹೇಳಿದ್ದೀರ. ನಮಗೆ ಸಂಶಯವಿಲ್ಲದ ಪೂರ್ತಿ ಸಮಾಧಾನವನ್ನು ಹೇಳಬೇಕಾಗಿ ಕೋರುತ್ತಿದ್ದೇವೆ. ಇದಕ್ಕು ಮೊದಲು ಹೇಳಿದ ಉತ್ತರದಲ್ಲಿ ಸ್ವಪರಾಗ, ಪರಾಗ, ಪರಪರಾಗ ಸಂಪರ್ಕಗಳೆಂದು ಮೂರು ವಿಧಾನಗಳನ್ನು ಹೇಳಿದ್ದೀರ. ಆ ಹೆಸರುಗಳನ್ನು ನಾವು ಯಾವಾಗಲೂ ಕೇಳಲಿಲ್ಲ. ಆದ್ದರಿಂದ ಆ ಮಾತುಗಳು ನಮಗೆ ಅರ್ಥವಾಗಲಿಲ್ಲ. ಆದ್ದರಿಂದ ಆ ಮೂರನ್ನು ವಿವರವಾಗಿ ತಿಳಿಸಿರೆಂದು ಕೋರುತ್ತಿದ್ದೇವೆ.**

**ಉತ್ತರ :–** ಬೀಜವು ಗಿಡವಾಗಿ ಮೊಳಕೆ ಬರುವ ವಿಧಾನವನ್ನು ಮಾತ್ರ ಹೇಳಿದ್ದೇನೆ ಆದರೆ, ಗಿಡ ಮೊದಲಾ? ಬೀಜ ಮೊದಲಾ? ಎನ್ನುವ ಪ್ರಶ್ನೆಯನ್ನು ತೀರ್ಮಾನಿಸಿ ಹೇಳಲಿಲ್ಲ. ವೃಕ್ಷದಲ್ಲಿ ಹೂವಿನಿಂದ ಬೀಜ ಹೇಗೆ ತಯಾರಾಗುತ್ತಿದೆಯೋ ಹೇಳುವ ಸಂದರ್ಭಗಳಲ್ಲಿ ಪರಾಗ ಸಂಪರ್ಕ, ಸ್ವಪರಾಗಸಂಪರ್ಕ, ಪರಪರಾಗ ಸಂಪರ್ಕ ಎನ್ನುವ ಮೂರು ವಿಧಾನಗಳನ್ನು ಹೇಳುವುದಾಗಿದೆ. ಅದನ್ನು ವಿವರವಾಗಿ ಹೇಳಿದರೆ ಹೀಗೆ ಇದೆ. ಸಂಪರ್ಕ ಎಂದರೆ ಸಂಯೋಗ ಎಂದೂ ಅಥವಾ ಸೇರುವಿಕೆ ಎಂದು ಹೇಳಬಹುದು. ಯಾವುದು, ಯಾವುದರೊಂದಿಗೆ ಸೇರುತ್ತದೆಂದು ಪ್ರಶ್ನಿಸಿಕೊಂಡು ನೋಡಿದರೆ, ಸ್ತ್ರೀ ಕಣದೊಂದಿಗೆ ಪುರುಷ

ಕಣ ಬೆರೆತುಹೋಗುತ್ತಿದೆಯೆಂದು ತಿಳಿಯುತ್ತಿದೆ. ಒಂದು ಹೂವನ್ನು ವಿಭಜಿಸಿದರೆ ಮೂರು ಮುಖ್ಯವಾದ ಭಾಗಗಳಿರುತ್ತವೆ. ಹೂವಿನ ಸುತ್ತಾ ಪುಷ್ಪದ ದಳಗಳಿರುತ್ತವೆ, ಹೂವಿನ ರೆಕ್ಕೆಗಳು ಬಣ್ಣದಿಂದ ಕೂಡಿಕೊಂಡಿರುತ್ತವೆ. ಹೂವಿನ ರೆಕ್ಕೆಗಳ ಮಧ್ಯದಲ್ಲಿ ಪರಾಗ ರೇಣುಗಳು ಹೊಂದಿದ ಚಿಕ್ಕ ಚಿಕ್ಕ ಕಡ್ಡಿಗಳಿರುತ್ತವೆ. ಹೂವಿನ ಮಧ್ಯದಲ್ಲಿ, ಪರಾಗ ರೇಣುಗಳ ಮಧ್ಯದಲ್ಲಿ ಸ್ವಲ್ಪ ಉದ್ದಹೊಂದಿರುವ ಕೇಸರ ಎಂಬ ಕಡ್ಡಿಯಿರುತ್ತದೆ. ಕೇಸರದ ಮೇಲ್ಭಾಗವನ್ನು "ಕೇಸರಾಗ್ರ" ಎಂದು ಕರೆಯುತ್ತೇವೆ. ಕೇಸರಾಗ್ರದಲ್ಲಿ ಸ್ತ್ರೀ ಕಣವಿರುತ್ತದೆ, ಪರಾಗ ಧೂಳಿಯಲ್ಲಿ (ರೇಣುಗಳಲ್ಲಿ) ಪುರುಷಕಣಗಳು ಇರುತ್ತವೆ. ಪರಾಗಧೂಳಿಯಲ್ಲಿರುವ ಪುರುಷಕಣ ಕೇಸರಾಗ್ರದಲ್ಲಿರುವ ಸ್ತ್ರೀ ಕಣವನ್ನು ಸೇರುವುದನ್ನು 'ಸಂಪರ್ಕ' ಎಂದು ಕರೆಯುತ್ತೇವೆ. ಯಾವಾಗಾದರೆ ಹೂವಿನಲ್ಲಿರುವ, ಪರಾಗಧೂಳಿಯಲ್ಲಿರುವ ಪುರುಷ ಕಣ ಕೇಸರಾಗ್ರದಲ್ಲಿ ಇರುವ ಸ್ತ್ರೀ ಕಣದೊಂದಿಗೆ ಬೆರೆಯುತ್ತದೋ, ಆಗ ಆ ಪುಷ್ಪವು ಫಲದೀಕರಣ ಹೊಂದಿದಂತಾಗುತ್ತದೆ. ಫಲದೀಕರಣ ಹೊಂದಿದ ಹೂವಿನೊಂದರ ರೆಕ್ಕೆಗಳು ಉದುರಿಹೋಗಿ ಕಾಯಾಗಿ ತಯಾರಾಗುತ್ತಾ ಬರುತ್ತದೆ.

ಒಂದು ಮಾವಿನ ಮರ ಹೂವು ಬಿಟ್ಟಾಗ ಹೂವೆಲ್ಲವೂ ಕಾಯಿಗಳಾಗಿ ಬದಲಾವಣೆಯಾಗುವುದಿಲ್ಲ. ಫಲದೀಕರಣ ಹೊಂದಿದ ಹೂಗಳು ಮಾತ್ರ ಕಾಯಿಗಳಾಗಿ ಬದಲಾವಣೆಯಾಗುತ್ತವೆ. ಯಾವ ಗಿಡದ ಹೂವಾದರೂ ಎಷ್ಟೋ ಕೀಟಕಗಳಿಗೆ, ಗಿಣಿಗಳಿಗೆ, ಗುಬ್ಬಚ್ಚಿಗಳಿಗೆ, ಜೇನುಳ್ಳಕ್ಕೆ, ಚಿಟ್ಟೆಗಳಿಗೆ ಅಂದವಾಗಿ ಕಾಣಿಸುತ್ತ ಅದನ್ನು ಆಕರ್ಷಿಸುತ್ತಿರುತ್ತದೆ. ಬಂದಿರುವ ಕೀಟಗಳು ಹೂವಿನ ಮೇಲೆ ಸಂಚರಿಸುತ್ತದೆ. ಹೂ ಮೇಲೆ ಕುಳಿತುಕೊಂಡಾಗ ಕೀಟಕಗಳ ಕಾಲಿಗೆ ಪರಾಗ ರೇಣುಗಳು ಅಂಟಿಕೊಳ್ಳುತ್ತವೆ. ಹಾಗೆ ಅಂಟಿಕೊಂಡ ಪರಾಗ ರೇಣುಗಳು ಅದೇ ಪುಷ್ಪವೊಂದರ ಕೇಸರಾಗ್ರದಲ್ಲಿರುವ ಸ್ತ್ರೀಕಣಕ್ಕೆ ಅಂಟಿಕೊಳ್ಳಬಹುದು ಅಥವಾ ಬೇರೆ ಗಿಡ ಅಥವಾ ಮರವೊಂದರ ಪುಷ್ಪದ ಮೇಲೆ ಕೀಟಕಗಳು ಸಂಚರಿಸಿದಾಗ ಆ ಪುಷ್ಪವೊಂದರ ಕೇಸರದ ಮೇಲಿರುವ ಕೇಸರಾಗ್ರದೊಳಗಿನ

ಸ್ತ್ರೀ ಕಣವನ್ನು ಸೇರಬಹುದು. ಕೀಟಕಗಳ ಕಾಲುಗಳಿಗೆ ಅಂಟಿಕೊಂಡಿರುವ ಒಂದು ಪುಷ್ಪದಲ್ಲಿನ ಪರಾಗಧೂಳಿ ಎನ್ನುವ ಪುರುಷಕಣಗಳು ಕೀಟಕದಿಂದ ಅದೇ ಪುಷ್ಪವೊಂದರ ಕೇಸರಾಗ್ರವನ್ನಾಗಲಿ ಅಥವಾ ಅದೇ ಜಾತಿವೊಂದರ ಮತ್ತೊಂದು ಪುಷ್ಪವೊಂದರ ಕೇಸರಾಗ್ರವನ್ನು ಸೇರಿ, ಫಲದೀಕರಣ ಹೊಂದಿ ಪುಷ್ಪವು ಕಾಯಾಗಿ ಬದಲಾವಣೆಯಾಗಬಹುದು. ಒಂದೊಂದು ಸಲ ಕೀಟಕಗಳು ಪಕ್ಕದಲ್ಲಿಯೇ ಇರುವ ಮತ್ತೊಂದು ಜಾತಿ ಪುಷ್ಪದಲ್ಲಿನ ಕೇಸರಾಗ್ರವನ್ನು ಸೇರಬಹುದು. ಆಗ ಒಂದು ಜಾತಿ ಪುರುಷಕಣದಿಂದ ಮತ್ತೊಂದು ಜಾತಿ ಗಿಡ ಸ್ತ್ರೀ ಕಣ ಫಲದೀಕರಣ ಹೊಂದುವುದು ನಡೆಯುತ್ತಿದೆ. ಈ ವಿಧವಾಗಿ ಪುಷ್ಪದಲ್ಲಿನ ಪರಾಗಧೂಳಿ ಎನ್ನುವ ಪುರುಷ ಕಣಗಳು ಅದೇ ಪುಷ್ಪವನ್ನು ಸೇರಬಹುದು ಅಥವಾ ಅದೇ ಜಾತಿ ಬೇರೊಂದು ಪುಷ್ಪವನ್ನು ಸೇರಬಹುದು. ಹಾಗಾಗದಿದ್ದರೆ ಬೇರೆಜಾತಿ ಗಿಡವೊಂದರ ಪುಷ್ಪವನ್ನು ಸೇರಿ ಫಲದೀಕರಣ ಹೊಂದಬಹುದು. ಈ ವಿಧವಾಗಿ ಫಲದೀಕರಣ ಮೂರು ವಿಧಗಳಾಗಿದೆ.

ಒಂದು ಪುಷ್ಪದಲ್ಲಿನ ಪರಾಗ ರೇಣುಗಳು ಅದೇ ಪುಷ್ಪದ ಕೇಸರವನ್ನು ಸೇರಿ ಫಲದೀಕರಣವಾಗುವುದನ್ನು **"ಸ್ವಪರಾಗ ಸಂಪರ್ಕ"** ಎಂದು ಹೇಳುತ್ತಾರೆ. ಒಂದು ಪುಷ್ಪದೊಳಗಿನ ಪರಾಗ ರೇಣುಗಳು ಅದೇ ಮತ್ತೊಂದು ಜಾತಿ ಪುಷ್ಪವನ್ನು ಸೇರಿ ಫಲದೀಕರಣವಾಗುವುದನ್ನು **"ಪರಾಗ ಸಂಪರ್ಕ"** ಎಂದು ಹೇಳುತ್ತಾರೆ. ಈ ಎರಡು ವಿಧಗಳಲ್ಲದೆ ಒಂದು ಪುಷ್ಪದಲ್ಲಿನ ಪರಾಗ ರೇಣುಗಳು ಬೇರೊಂದು ಜಾತಿ ಮರವೊಂದರ ಹೂವಿನೊಳಗಿನ ಕೇಸರಾಗ್ರವನ್ನು ಸೇರಿ ಫಲದೀಕರಣ ಹೊಂದಿದರೆ ಅದನ್ನು ತಪ್ಪದೆ **"ಪರ ಪರಾಗ ಸಂಪರ್ಕ"** ಎಂದು ಹೇಳಬೇಕು. ಈ ಮೂರು ವಿಧಾನಗಳು ಬಹುಶಃ ಸ್ವಲ್ಪ ವಿದ್ಯೆ ಕಲಿತವರಿಗೆಲ್ಲರಿಗೂ ತಿಳಿದೇ ಇರುತ್ತದೆ. ಒಂದು ಹೂವು ಕಾಯಾಗಿ ಹೇಗೆ ಬದಲಾವಣೆಯಾಗುತ್ತಿದೆ ಎನ್ನುವುದು ಮುಖ್ಯವಲ್ಲ ಆದರೆ, ಬೀಜಕ್ಕೆ ಗಿಡ ಕಾರಣವಾ, ಗಿಡಕ್ಕೆ ಬೀಜ ಕಾರಣವಾ? ಎಂದು ತಿಳಿಯುವುದು ಮುಖ್ಯ.


ಕೇಸರಾಗ್ರ
ಕೇಸರ
ಹಳದಿ ಬಣ್ಣದ
ಪುಷ್ಪಪರಾಗ ರೇಣುಗಳು
ಹೂವು
ಕಾಂಡ


ಗಿಡ
ಬೀಜ

ಈ ಪ್ರಶ್ನೆಗೆ ಉತ್ತರವನ್ನು ತಿಳಿಯುವುದಕ್ಕೆ ಒಂದು ಕಡಲೆಬೀಜವನ್ನು ತೆಗೆದುಕೊಂಡು ನೋಡೋಣ. ಹಾಗೆಯೇ ಮೊಳಕೆಬಂದ ನಂತರ ಎರಡು ತಿಂಗಳ ವಯಸ್ಸಿರುವ ಕಡಲೆಗಿಡವನ್ನು ಸಹ ಗಮನಿಸೋಣ. ಕಡಲೆ ಬೀಜ ದ್ವಿದಳಬೀಜವಾಗಿ ಇದೆ. ದ್ವಿದಳ ಬೀಜವೆಂದರೆ ಎರಡು ಭಾಗಗಳಾಗಿರುವ ಬೀಜವೆಂದು ಅರ್ಥ. ಒಂದು ಕಡಲೆಬೀಜವನ್ನು ತೆಗೆದುಕೊಂಡು ಮೇಲಿರುವ ಕೆಂಪನೆಯ ಹೊಟ್ಟನ್ನು ಸ್ವಲ್ಪ ತೊಲಗಿಸಿದಾಗ ಎರಡು ಬೇಳೆಗಳು ಒಂದರಪಕ್ಕದಲ್ಲಿ ಮತ್ತೊಂದು ಭಾಗ ಅಂಟಿಕೊಂಡಿರುವಂತೆ ಕಾಣಿಸುತ್ತದೆ. ಎರಡು ಬೇಳೆಗಳನ್ನು ಚಿಕ್ಕದಾಗಿ ಪ್ರಯತ್ನಮಾಡಿ ಬೇರೆಮಾಡಿದಾಗ ಒಂದು ಭಾಗದ ಕೆಳಗಿನ ಭಾಗದಲ್ಲಿ ಎಂದರೇ ತುದಿ ಭಾಗದಲ್ಲಿ ಮುರಿದುಹೋಗಿ ಉದುರಿಬರುತ್ತದೆ. ಮತ್ತೊಂದು ಬೇಳೆಗೆ ಕೆಳಗಿನ ಭಾಗದಲ್ಲಿ ಬೀಜವೊಂದರ ಕೊನೆಯ ತುದಿಯಲ್ಲಿ ಚಿಕ್ಕ ಉಂಡೆಯಂತಿದ್ದು, ಆ ಉಂಡೆಯಲ್ಲಿಂದ ಒಂದು ಕಡೆಲಗಿಡ ಹುಟ್ಟಿರುವಂತೆ ಕಾಣಿಸುತ್ತದೆ. ಕಡಲೆಬೀಜದಿಂದ ಮೊದಲು ಹೊರಗೆ ಬಂದಿರುವ ಗಿಡದ ಆಕಾರದಿಂದಲೇ ಆ ಗಿಡ ಕಾಣಿಸುತ್ತದೆ. ತುದಿ ಭಾಗದಲ್ಲಿ ಚಿಕ್ಕದಾಗಿ ಕಡಲೆಗಿಡ ಇರುವಂತೆ ಎಲೆಗಳು ಒಂದರಲ್ಲಿ ಮತ್ತೊಂದು ಜೋಡಿಸಿಟ್ಟಂತೆ, ಎಲೆಗಳ ಗುರುತುಗಳೊಂದಿಗೆ ಗಿಡ ಪೂರ್ತಿಯಾಗಿ ಕಾಣಿಸುತ್ತದೆ. ಕಡಲೆಬೀಜದಲ್ಲಿಯೇ ಕಡಲೆಗಿಡವನ್ನು ಆಳವಡಿಸಿರುವಂತೆ ಗಿಡದ ಎಲೆಗಳ ಆಕಾರ ಕಾಣಿಸುತ್ತಿದೆ. ಬೀಜಕ್ಕೆ ತೇವ ತಾಕಿದಾಗ ಅಂದರೆ ಬೀಜದ ಕೊನೆಭಾಗದಲ್ಲಿ ತೇವ ತಗಲುತ್ತಲೇ ಬೀಜದಲ್ಲಿ ರಾಸಾಯನ ಬದಲಾವಣೆ ನಡೆದು ಬೀಜದಲ್ಲಿ ಕಾಣಿಸುವ ಗಿಡ ಭೂಮಿಯಿಂದ ಹೊರಗೆ ಬರುತ್ತದೆ. ಬೀಜ ಬಲವಂತವಾಗಿ ಹೊರಗೆ ತಳ್ಳಿದಂತೆ ಯಾರೋ ಹೊರಗೆ ಎಳೆದಂತೆ ಗಿಡದ ತುದಿ ಹೊರಗೆ ಬೆಳೆಯುತ್ತಾ ಬಂದು ಒಳಗೆ ಕಾಣಿಸಿದ ಎಲೆಗಳು ಹೊರಗೆ ಬರುತ್ತಿವೆ.

ಒಳಗೆ ಕಾಣಿಸಿದ ಎಲೆಗಳು ಬಿಳಿಬಣ್ಣದಿಂದ ಕಾಣಿಸಿದಾಗ ಹೊರಗೆ ಬಂದಿರುವ ಎಲೆಗಳು ಗಿಳಿಹಸಿರು ಬಣ್ಣದಲ್ಲಿ ಗ್ರೀನ್‌ಕಲರ್‌ನಲ್ಲಿ ಕಾಣಿಸುತ್ತಿವೆ. ಹಾಗೆ ಬೀಜದಿಂದ ಹೊರಬಿದ್ದ ಕಡಲೆ ಗಿಡವನ್ನು ಎರಡು ತಿಂಗಳು ಗಮನಿಸಿದರೆ

ಅದರಲ್ಲಿ ಕಡಲೆ ಬೀಜವೊಂದರ ನಮೂನೆ ಎಲ್ಲಿಯೂ ಕಾಣಿಸಲಿಲ್ಲ. ಕಡಲೆ ಗಿಡದಲ್ಲಿ ಎರಡು ವಿಧಗಳು ಇವೆ. ಅದರಲ್ಲಿ ಮೂರು ತಿಂಗಳಿಗೆ ಬೆಳೆಯುವುದು ಒಂದಾದಾಗ, ಐದು ತಿಂಗಳಿಗೆ ಬೆಳೆಯುವುದು ಸಹ ಇದೆ. ಮೂರು ತಿಂಗಳಿಗೆ ಬೆಳೆಯುವುದನ್ನು ಗುತ್ತು ಕಡಲೆಬೀಜ ಎಂದೂ, ಐದು ತಿಂಗಳಿಗೆ ಬೆಳೆಯುವುದನ್ನು ಬಳ್ಳಿ ಕಡಲೆಬೀಜ ಎಂದು ಕರೆಯುತ್ತಾರೆ. ಎರಡು ವಿಧಗಳ ಬೀಜಗಳಲ್ಲಿ ಇದಕ್ಕುಮೊದಲು ನಾವು ಹೇಳಿದಂತೆ ಬೀಜದ ಕೊನೆಭಾಗದಲ್ಲಿ ಕಡಲೆಬೀಜದ ಆಕಾರ ಕಾಣಿಸಿ ಕಾಣಿಸದಂತೆ ಬಹಳ ಚಿಕ್ಕದಾಗಿರುತ್ತದೆ. ಗಿಡ ಬೆಳೆದು ದೊಡ್ಡದಾದ ನಂತರ ಹೂವುಗಳು ಹರಳಿದನಂತರ ಫಲದೀಕರಣ ಎಂಬ ರಾಸಾಯನ ಕ್ರಿಯೆ ನಡೆದು ಬೀಜವಾಗಿ ಬದಲಾಗುತ್ತದೆ. ನಂತರ ಬೀಜವು ಸಸಿಯಾಗಿ ಬದಲಾಗುತ್ತದೆ. ಬೀಜದಲ್ಲಿ ಗಿಡವಿದೆ ಆದರೆ, ಗಿಡದಲ್ಲಿ ಬೀಜವಿಲ್ಲ. ಕೆಲವು ತಿಂಗಳಿಗೆ ತಯಾರಾದ ಬೆಳೆ ಕೂಡಾ ಗಿಡದ ಹೊರಗೇ ಬರುತ್ತಿದೆ ಹೊರತು ಗಿಡದ ಒಳಗೆ ಬೆಳೆ ಇಲ್ಲ. ಆದ್ದರಿಂದ ಬೀಜದಲ್ಲಿ ಗಿಡವಿದೆ ಹೊರತು, ಗಿಡದಲ್ಲಿ ಬೀಜ ಇಲ್ಲವೆಂದು ಹೇಳಬಹುದು. ಬೀಜದೊಳಗೆ ಮೊದಲೇ ಆಕಾರದಿಂದಿರುವ ಗಿಡ ಹೊರಗೆ ಬರುತ್ತಿದೆ. ಗಿಡದಿಂದ ಬೀಜ ಹೊರಗೆ ಬರಲಿಲ್ಲ. ಗಿಡ ತಯಾರಾದ ಮೂರು ತಿಂಗಳಿಗೆ ಬೀಜ ಕಾಣಿಸುತ್ತಿದೆ. ಅದೇ ಬೀಜದಲ್ಲಿ ಯಾವಾಗ ಗಮನಿಸಿದರೂ ಗಿಡದ ನಮೂನೆ ಮುಂಚೆಯೇ ಇರುತ್ತದೆ. ಅದಕ್ಕಾಗಿ ಗಿಡಕ್ಕಿಂತ ಬೀಜವೇ ಮೊದಲಿದೆಯೆಂದು ಹೇಳಬಹುದು.

ಚಿಕ್ಕದಾಗಿರುವ ಕೆಲವು ಸಸಿಗಳನ್ನು ದೊಡ್ಡವಾದರೂ ಗಿಡವೆಂದು ಹೇಳುವುದು ನಡೆಯುತ್ತಿರುತ್ತದೆ. ಕಡಲೆಬೀಜವನ್ನು ಮರವೆಂದಾಗಲಿ, ವೃಕ್ಷವೆಂದಾಗಲಿ ಕರೆಯುವುದಕ್ಕೆ ಅವಕಾಶವಿಲ್ಲ. ಏಕೆಂದರೇ! ಈ ಗಿಡಗಳು ಅರ್ಧ ಅಡಿ ಅಥವಾ ಅಡಿ ಮಾತ್ರವೇ ಬೆಳೆಯುತ್ತವೆ. ಮೂರರಿಂದ ಐದು ತಿಂಗಳು ಮಾತ್ರವೇ ಬದುಕುತ್ತವೆ. ಆದ್ದರಿಂದ ಇವುಗಳನ್ನು ಗಿಡವೆಂದು ಹೇಳುವುದು ನಡೆಯುತ್ತಿದೆ. ಗಿಡದಲ್ಲಿ ಬೀಜ ನೇರವಾಗಿ ಬರಲಿಲ್ಲ. ಮೊದಲು ಹೂಗಳು, ನಂತರ ಕಾಯಿಗಳು ಬರುತ್ತವೆ. ಕಾಯಿಗಳು ಪರಿಪಕ್ವಕ್ಕೆ ಬಂದು

ಹಣ್ಣಾದ ನಂತರ, ಹಣ್ಣು ಕೂಡಾ ಪೂರ್ತಿ ಒಣಗಿಹೋದ ನಂತರ ಹಣ್ಣಿನಿಂದ ಬೀಜಗಳು ಹೊರಬೀಳುತ್ತವೆ. ಕೆಲವು ಹಣ್ಣುಗಳು ಹಣ್ಣಾಗಿಯೇ ನಿಂತುಹೋಗಿರುವಾಗ ಅವುಗಳಿಂದ ಮನುಷ್ಯ ಪ್ರಯತ್ನಮಾಡಿ ಬೀಜಗಳನ್ನು ಹೊರಗೆ ತೆಗೆಯಬೇಕಾಗಿರುತ್ತದೆ. ಹಾಗೆ ತೆಗೆಯದೆಹೋದರೆ ಎಷ್ಟು ಕಾಲಕಳೆದರೂ ಬೀಜ ಕಾಣಿಸದೆ ಹಣ್ಣಿನಲ್ಲಿಯೇ ಕಾಣಿಸದಂತೆ ಇರುತ್ತದೆ. ಗಿಡ ಬದುಕಿರುವಾಗ ಯಾವ ದಶೆಯಲ್ಲಿಯೂ ಗಿಡದಲ್ಲಿ, ಕಾಯಿಗಳವರೆಗು ಕಾಣಿಸುತ್ತವೆ ಹೊರತು ಬೀಜಗಳು ಕಾಣಿಸುವುದಿಲ್ಲ. ಅದೇ ಬೀಜದಲ್ಲಿ ಯಾವಾಗಾದರೂ ಗಿಡ ನೇರವಾಗಿ ಹೊರಗೆ ಬರುತ್ತದೆ. ಯಾವಾಗ ಬೀಜವನ್ನು ಹೊಡೆದು ನೋಡಿದರೂ ಅದರಲ್ಲಿ ಗಿಡ ಚಿಕ್ಕದಾಗಿ ಕಾಣಿಸುತ್ತದೆ. ಆದ್ದರಿಂದ ಬೀಜದಲ್ಲಿ ಗಿಡವಿದೆ. ಆದರೆ ಗಿಡದಲ್ಲಿ ಯಾವ ದಶೆಯಲ್ಲಿ ಕೂಡಾ ಬೀಜವಿಲ್ಲ. ಆದ್ದರಿಂದ **ಗಿಡಕ್ಕಿಂತ ಬೀಜ ಮೊದಲೆಂದು** ಆಧಾರವನ್ನು (ಸಾಕ್ಷಿಯನ್ನು) ತೋರಿಸುತ್ತಾ ಹೇಳಬಹುದು.

**ಪ್ರಶ್ನೆ :– ಗಿಡಮೊದಲಾ ಬೀಜಮೊದಲಾ? ಎನ್ನುವ ವಿಷಯದಲ್ಲಿ ಸಾಕ್ಷಿ ಆಧಾರದಿಂದ ಸಹ ಬೀಜವೇ ಮೊದಲೆಂದು ತಿಳಿಯುತ್ತಿದೆ. ಆದರೆ ಗಿಡಕ್ಕೆ ಬೀಜವಾದ ಬೀಜ ಮೊದಲು ಎಲ್ಲಿಂದ ಬಂದಿದೆಯೆಂದು? ಬೀಜದಿಂದಲೇ ನೇರವಾಗಿ ಗಿಡ ಬರುತ್ತಿದೆಯೆಂದು ನೀವು ಹೇಳಿದ ನಂತರ ಅನುಮಾನ ಇಲ್ಲದಂತೆ ತಿಳಿದುಹೋಗಿದೆ. ಆದರೂ ಮೊದಲು ಬೀಜ ಗಿಡದಿಂದ ಬರಲಿಲ್ಲವಾ? ಎನ್ನುವ ಪ್ರಶ್ನೆ ಕೆಲವರಲ್ಲಾದರೂ ಉಳಿದಿರುತ್ತದೆ. ಅವರಲ್ಲಿ ಉಳಿದ ಅನುಮಾನಕ್ಕೆ ನೀವೇ ನಿವೃತ್ತಿಯನ್ನು ತೋರಿಸಬೇಕು?**

**ಉತ್ತರ :–** ಸೃಷ್ಟಿ ಸೃಷ್ಟಿಸಲ್ಪಟ್ಟಿದೆಯೆಂದು ಹೇಳುತ್ತಿದ್ದೇವೆ. ಸೃಷ್ಟಿಸಿದವನು ಸೃಷ್ಟಿಕರ್ತನಾದ ದೇವರು. ದೇವರು ಈ ಪ್ರಪಂಚವನ್ನು ಮೊದಲು ಒಂದುಸಲ ಸೃಷ್ಟಿಸಿದ್ದಾನೆ ನಂತರ ಸೃಷ್ಟಿ ಮುಂದುವರೆದಿದೆ. ಗಿಡದಿಂದ ಬೀಜ ಬರುತ್ತಿದ್ದರೆ ದೇವರು ಯಾವುದನ್ನು ಸೃಷ್ಟಿಸಬೇಕಾದ ಅವಶ್ಯಕತೆಯೇ ಇಲ್ಲ. ದೇವರು ಮೊದಲು ಬೀಜವನ್ನು ಸೃಷ್ಟಿಸಿದಾಗ, ಬೀಜದಲ್ಲಿಯೇ ಗಿಡವನ್ನು ಅಳವಡಿಸಿ ಸೃಷ್ಟಿಸುವುದರಿಂದ ಬೀಜದಿಂದ ಗಿಡ ತಯಾರಾಗಿ, ನಂತರ ಗಿಡದಿಂದ ಬೀಜಗಳು

ತಯಾರಾಗಿವೆ. ಈ ವಿಧವಾಗಿ ಮೊದಲು ದೇವರು ಬೀಜವನ್ನು ತಯಾರು ಮಾಡಿದಾಗ ಅದರಿಂದ ಗಿಡ ಹುಟ್ಟಿದೆ. ಅಷ್ಟೇ ಹೊರತು ಮೊದಲು ದೇವರು ಗಿಡವನ್ನು ತಯಾರು ಮಾಡಲಿಲ್ಲ. ಗಿಡ ಒಳಗೊಂಡಿರುವ ಬೀಜವನ್ನು ತಯಾರು ಮಾಡಿದ ದೇವರು ಬೀಜದಿಂದ ಗಿಡವನ್ನು ಹುಟ್ಟುವಂತೆ ಮಾಡಿದ್ದಾನೆ. ವಿಶಾಲವಾಗಿ ಕಾಣಿಸುವ ಗಿಡಗಳು ಬೀಜಗಳಿಂದ ಹುಟ್ಟಿವೆ ಹೊರತು ದೇವರು ಸೃಷ್ಟಿಸಲಿಲ್ಲವೆಂದು ನಾಸ್ತಿಕರು ಹೇಳುತ್ತಿರುತ್ತಾರೆ. ಆದರೇ ಗಿಡಕ್ಕೆ ಕಾರಣವಾದ ಬೀಜ ಮೊದಲು ಹೇಗೆ ಬಂದಿದೆಯೆಂದು ಯಾರೂ ಆಲೋಚಿಸದೆ "ಗಿಡದಿಂದ ಬೀಜ ಬಂದಿದೆ" ಎಂದು ತಿಳಿದುಕೊಳ್ಳುತ್ತಿದ್ದಾರೆ. ಹಾಗೆ ಒಂದರಿಂದ ಮತ್ತೊಂದು ಬರುತ್ತಿದ್ದರೆ ದೇವರು ಯಾವುದನ್ನು ಸೃಷ್ಟಿಸಲಿಲ್ಲವೆಂದು ಹೇಳಬಹುದು.

ದೇವರು ಮೊದಲು ತನ್ನ ಮನಸ್ಸಿನ ಮುಖಾಂತರ ಅಂದರೆ ಸಂಕಲ್ಪದ ಮೂಲಕ ಸೃಷ್ಟಿಯನ್ನು ತಯಾರು ಮಾಡಬೇಕೆಂದುಕೊಂಡಿದ್ದಾನೆ. ಆತನು ಅಂದುಕೊಂಡ ತಕ್ಷಣವೇ ಸೃಷ್ಟಿ ತಯಾರಾಗಿದೆ. ದೇವರು ಸ್ಥೂಲವಾದ ಸೃಷ್ಟಿಯನ್ನು ಒಂದುಸಲ ತಯಾರು ಮಾಡಲಿಲ್ಲ. ಮೊದಲು ಸೂಕ್ಷ್ಮವಾದ ಊಹೆಯಿಂದ ಸೃಷ್ಟಿಗೆ ಬೀಜವನ್ನು ತಯಾರು ಮಾಡಿದ್ದಾನೆ. ಆತನ ಆಲೋಚನೆಯೇ ಸ್ಥೂಲ ಸೃಷ್ಟಿಗೆ ಸೂಕ್ಷ್ಮವಾದ ಬೀಜವೆಂದು ತಿಳಿಯಬೇಕು. ಈ ವಿಷಯವಾಗಿ ಭಗವದ್ಗೀತೆಯಲ್ಲಿ ವಿಭೂತಿ ಯೋಗದಲ್ಲಿ ಆರನೇ ಶ್ಲೋಕದಲ್ಲಿ ಹೀಗೆ ಇದೆ ನೋಡಿರಿ. 9 ಅ. 6 ನೇ.

**ಶ್ಲೋ :- ಮಹರ್ಷಯ ಸ್ಸಪ್ತ ಪೂರ್ವೇ ಚತ್ವಾರೋ ಮನವಸ್ಥಥಾ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ॥**

ಈ ಶ್ಲೋಕದಲ್ಲಿ ಬಹಳಜನ ಭಾವನೆಯನ್ನು ತಪ್ಪು ಬರೆದುಕೊಂಡಿದ್ದಾರೆ. ದೇವರು ಮೊದಲು ಸಪ್ತ ಋಷಿಗಳನ್ನು, ನಾಲ್ಕುಜನ ಮನುಗಳನ್ನು ಸೃಷ್ಟಿಸಿದ್ದಾನೆಂದು, ಮೊದಲು ಹುಟ್ಟಿದ ಹನ್ನೊಂದುಜನರ ಮೂಲಕ ಉಳಿದ ಪ್ರಜೆಗಳೆಲ್ಲರೂ ಹುಟ್ಟಿದ್ದಾರೆಂದು ಬರೆದುಕೊಂಡಿದ್ದಾರೆ. ದೇವರು ಎಂದಿಗೂ

ಸ್ಥೂಲ ಪ್ರಪಂಚವನ್ನು ನೇರವಾಗಿ ತಯಾರು ಮಾಡಲಿಲ್ಲ. ಸ್ಥೂಲ ಪ್ರಪಂಚಕ್ಕೆ ಕಾರಣವಾದ ಸೂಕ್ಷ್ಮವಾದ ಕಾರಣವನ್ನು (ಬೀಜವನ್ನು) ತಯಾರು ಮಾಡಿದ್ದಾನೆ. ಅದರಮೂಲಕ ಸ್ಥೂಲ ಪ್ರಪಂಚವೆಲ್ಲ ತಯಾರಾಗಿದೆ. ಈ ಪ್ರಪಂಚಕ್ಕೆ ಆತನ ಆಲೋಚನೆಯೇ ಮೊದಲ ಬೀಜವೆಂದು ತಿಳಿಯಬೇಕು. ಮೇಲಿನ ಶ್ಲೋಕದಲ್ಲಿ ದೇವರ ಭಾವನೆಯಲ್ಲಿನ ಮನೋ ಸಂಕಲ್ಪವೇ ಮೊದಲ ಏಳು ಮಹರ್ಷಿಯಗಳು, ನಾಲ್ಕು ಮನುಗಳು ತಯಾರಾಗಿವೆಯೆಂದು ಹೇಳಿದ್ದಾನೆ. ಏಳು ಮಹರ್ಷಿಯರು ಎಂದರೆ ಏಳು ನಾಡೀಕೇಂದ್ರಗಳು, ಮನಸ್ಸು ಮೊದಲಾದ ನಾಲ್ಕು ಅಂತಃಕರಣ ಭಾಗಗಳೇ ಸಮಸ್ತ ಪ್ರಪಂಚಕ್ಕೆ ಮೂಲ ಕಾರಣವಾದ ಬೀಜವಾಗಿ ಇವೆ. ಪ್ರತಿ ಜೀವರಾಶಿ ಹಿಂದೆ ಏಳು ಮತ್ತು ನಾಲ್ಕು ಬೀಜವಾಗಿದ್ದು ಸಮಸ್ತ ಜೀವಕೋಟಿ ತಯಾರಾಗಿದೆ. ಗಿಡವೊಂದರ ಬೀಜದಲ್ಲಾಗಲೀ, ಮನುಷ್ಯವೊಂದರ ವೀರ್ಯ ಕಣದಲ್ಲಾಗಲಿ, ಮೊಟ್ಟೆವೊಂದರ ಮಧ್ಯಕಣದಲ್ಲಾಗಲೀ ದೇವರು ಹೇಳಿದ ಏಳು ಮತ್ತು ನಾಲ್ಕು (ಏಳು ನಾಡೀಕೇಂದ್ರಗಳು, ನಾಲ್ಕು ಅಂತಃಕರಣಗಳು) ಬೀಜಗಳಾಗಿವೆ. ಅಂಡಜ, ಪಿಂಡಜ, ಉದ್ಭಿಜ ಎನ್ನುವ ಮೂರು ವಿಧಗಳ ಸೃಷ್ಟಿಗೆ ಏಳು ಮತ್ತು ನಾಲ್ಕು ಒಟ್ಟು ಹನ್ನೊಂದು ಬೀಜವಾಗಿವೆ. ಹನ್ನೊಂದು ಮೇಲ್ನೋಟಕ್ಕೆ ಕಾಣಿಸದೆ ಇರುವ ಬೀಜದಲ್ಲಿ ಏಳು ಅಡಕವಾಗಿವೆ. ಬೀಜದ ಮೂಲಕ ಹುಟ್ಟಿದ ಗಿಡದಲ್ಲಿ ಕಾಣಿಸದ ಏಳು ನಾಡೀಕೇಂದ್ರಗಳು, ಮನೋ, ಬುದ್ಧಿ, ಚಿತ್ತವು, ಅಹಮ್ ಎನ್ನುವ ನಾಲ್ಕು ಒಳಗೊಂಡಿವೆಯೆಂದು ತಿಳಿಯಬೇಕು.

**ಪ್ರಶ್ನೆ:– ನೀವು ಭಗವದ್ಗೀತೆ ಆಧಾರದಿಂದ ದೇವರ 'ಮನೋಭಾವನೆ' ಬೀಜವಾದಾಗ ಸಮಸ್ತ ಮಾನವರು ಹುಟ್ಟಿದ್ದಾರೆಂದು ಹೇಳುತ್ತಿದ್ದೀರ. ಉಳಿದ ಮತದವರು ಅವರ ಗ್ರಂಥಗಳಲ್ಲಿ ಇನ್ನೊಂದು ವಿಧವಾಗಿ ಹೇಳುತ್ತಾ ದೇವರು ಮೊದಲು ಒಬ್ಬ ಸ್ತ್ರೀಯನ್ನು, ಒಬ್ಬ ಪುರುಷನನ್ನು ಸೃಷ್ಟಿಸಿ ಭೂಮಿಮೇಲೆ ಬಿಟ್ಟಿದ್ದಾನೆಂದು, ನಂತರ ಅವರು ದೇವರು ಹೇಳಿದ ನಿಯಮ ನಿಬಂಧನೆಗಳನ್ನು ಉಲ್ಲಂಘಿಸಿದ್ದಾರೆಂದು, ಅದಕ್ಕೆ ದೇವರಿಗೆ ಕೋಪ ಬಂದು ಅವರಿಗೆ ಸಂತಾನೋತ್ಪತ್ತಿ ಉಂಟಾಗುವಂತೆ ಶಪಿಸಿದ್ದಾ ನೆಂದು ಕೇಳಿದ್ದೇವೆ. ಹಾಗೆ ಶಾಪ ಹೊಂದಿದವರು ಪ್ರಪಂಚದಲ್ಲಿನ ಮನುಷ್ಯರ**

**ಉತ್ಪತ್ತಿಗೆ ಕಾರಣವಾಗಿದ್ದಾರೆಂದು ಕೇಳಿದ್ದೇವೆ. ಇಂದಿನ ಜನರೆಲ್ಲರೂ ಆದಾಮ್ ಸಂತತಿಯೇ ಎಂದು ಕೆಲವರು ಹೇಳಿದಾಗ ಕೇಳಿದ್ದೇವೆ. ಈ ವಿಷಯವನ್ನು ಒಂದು ಮತದವರೇ ಅಲ್ಲದೆ ಇಸ್ಲಾಮ್ ಮತದವರು, ಕ್ರೈಸ್ತ ಮತದವರು ಇಬ್ಬರೂ ಆದಾಮ್, ಅವ್ವರನ್ನು ಕುರಿತು ಹೇಳಿ ಮೊದಲು ಅವರ ಸಂತಾನವೇ ಇಂದಿನ ಜನಸಂಖ್ಯೆಯೆಂದು ಹೇಳುತ್ತಿರುವಾಗ, ನೀವು ಹಿಂದೂ ಮತದವರೇ ಆದರೂ ಮತ್ತೊಂದು ವಿಧವಾಗಿ ಹೇಳುತ್ತಿದ್ದೀರ. ಉಳಿದ ಎರಡು ಮತದವರು ಒಂದು ವಿಧವಾಗಿ ಹೇಳಿದಾಗ, ಒಂದು ಹಿಂದೂಮತದವರು ಮಾತ್ರ ಹಾಗೆ ಹೇಳುವುದರಿಂದ ನಾವು ಸಂದಿಗ್ಧದಲ್ಲಿ ಮುಳುಗಿದ್ದೇವೆ. "ಕರ್ಮಮೊದಲಾ ಜನ್ಮಮೊದಲಾ?" ಎನ್ನುವ ಪ್ರಶ್ನೆಗು ವಿವರ ತಿಳಿಯದಂತೆ ಹೋಗುತ್ತಿದೆ. ಈ ವಿಧಾನ ಸಕ್ರಮವಾಗಿ ತಿಳಿದರೆ ಗಿಡಮೊದಲಾ ಬೀಜಮೊದಲಾ? ಎನ್ನುವ ವಿಷಯದಲ್ಲಿ ನಿಮ್ಮ ಸಮಾಧಾನದ ಮೇಲೆ ನಂಬಿಕೆ ಏರ್ಪಡುತ್ತದೆ. ದಯೆಮಾಡಿ ನಮಗೆ ಅರ್ಥವಾಗುವಂತೆ ವಿವರವಾಗಿ ಹೇಳುತ್ತೀರೆಂದು ಕೋರುತ್ತಿದ್ದೇವೆ.**

**ಉತ್ತರ :–** ನನಗೆ ತಿಳಿದ ವಿವರವನ್ನು ತಪ್ಪದೆ ತಿಳಿಸುತ್ತೇನೆ ಶ್ರದ್ಧೆಯಿಂದ ಕೇಳಿರಿ. ದೇವರು ಮೊದಲು ಸೃಷ್ಟಿ ಆದಿಯಲ್ಲಿಯೇ ತನ್ನ ಜ್ಞಾನವನ್ನು ಆಕಾಶವಾಣಿ ಮೂಲಕ ತಿಳಿಸಿದ್ದಾನೆ. ದೇವರು ವಾಣಿ ಮೂಲಕ ತಿಳಿಸಿದ ಜ್ಞಾನವನ್ನು ಗ್ರಹಿಸಲ್ಪಟ್ಟವನು ಸೂರ್ಯನು. ಸೂರ್ಯನು ಗ್ರಹಿಸಿದ ಜ್ಞಾನವನ್ನು ಮೊದಲು ಭೂಮಿಮೇಲೆಗೆ ತಂದು **'ತೆಲುಗು'** ಭಾಷೆಯಲ್ಲಿ ಹೇಳುವುದು ನಡೆದಿದೆ. ಹಾಗೆ ಭೂಮಿಮೇಲಕ್ಕೆ ಮಾತುಗಳ ರೂಪದಲ್ಲಿ ಬಂದಿರುವ ಜ್ಞಾನ ಗ್ರಂಥರೂಪದಲ್ಲಿ ಐದು ಸಾವಿರ ವರ್ಷಗಳ ಪೂರ್ವದಲ್ಲಿ ತಯಾರಾಗಿದೆ. ಹಾಗೆ ತಯಾರಾದ ಗ್ರಂಥವೇ ಪ್ರಥಮ ದೈವಗ್ರಂಥವಾಗಿ ಹೆಸರುವಾಸಿಯಾಗಿದೆ. ಆ ಪ್ರಥಮ ದೈವಗ್ರಂಥವೇ ಇಂದು **"ಭಗವದ್ಗೀತೆ"** ಯಾಗಿ ನಮ್ಮಮುಂದಿದೆ. ನಂತರ ಸ್ವಲ್ಪ ಕಾಲಕ್ಕೆ ಇನ್ನೊಂದು ದೇಶವಾದ ಇಸ್ರಾಯೇಲ್ ದೇಶದಲ್ಲಿ ದ್ವಿತೀಯ ದೈವಗ್ರಂಥವಾಗಿ ಬರೆಯಲ್ಪಟ್ಟಿದೆ. ಇಂದಿಗೆ ಎರಡುಸಾವಿರ ವರ್ಷಗಳ ಕೆಳಗೆ ತಯಾರಾದ ದ್ವಿತೀಯ ದೈವಗ್ರಂಥವನ್ನೇ ಕೆಲವರು **"ಇಂಜೀಲು"** ಗ್ರಂಥವೆಂದು

ಕರೆಯುತ್ತಿದ್ದಾರೆ. ಅದನ್ನೇ ಕೆಲವರು **"ಬೈಬಲ್"** ಗ್ರಂಥವೆಂದು ಕರೆಯುತ್ತಿದ್ದಾರೆ. ಎರಡು ಗ್ರಂಥಗಳಾಗಿ ದೈವಜ್ಞಾನ ಹೊರಗೆ ಬಂದರೂ, ಮನುಷ್ಯರು ಅಜ್ಞಾನ ಸ್ಥಿತಿಯಲ್ಲಿ ಇದ್ದಾರೆಂಬ ಭಾವನೆಯಿಂದ ದೇವರು ತನ್ನ ಜ್ಞಾನವನ್ನು ಮೂರನೇ ಗ್ರಂಥರೂಪ ಮಾಡಿದ್ದಾನೆ. ಹಾಗೆ ತೃತೀಯ ದೈವಗ್ರಂಥವಾಗಿ ತಯಾರಾಗಿರುವುದೇ **"ಖುರಾನ್"** ಗ್ರಂಥ. ಮೊದಲು ಭೂಮಿಮೇಲಕ್ಕೆ ಬಂದಿರುವ ದೈವಜ್ಞಾನವೇ ಮೂರು ಗ್ರಂಥಗಳಾಗಿ ತಯಾರಾದರೂ ಮೂರು ಗ್ರಂಥಗಳಲ್ಲಿರುವುದು ಒಂದೇ ಜ್ಞಾನವೆಂದು ಮನುಷ್ಯ ತಿಳಿಯಲಾರದೆ ಬೇರೆಬೇರೆ ಜ್ಞಾನಗಳಾಗಿ ಲೆಕ್ಕಿಸಿಕೊಂಡು, ಬೇರೆಬೇರೆ ಮತಗಳಾಗಿ ತಯಾರು ಮಾಡಿಕೊಂಡಿದ್ದಾನೆ. ಮನುಷ್ಯನಲ್ಲಿನ ಅಜ್ಞಾನವನ್ನು ತೆಗೆದುಹಾಕಿ ಮತಗಳಿಗೆ ಅತೀತವಾಗಿ ಜ್ಞಾನವನ್ನು ತಿಳಿಯುವುದಾದರೇ ಸೃಷ್ಟಿಗೆಲ್ಲಾ ಒಂದೇ ಜ್ಞಾನ, ಒಂದೇ ದೇವರು ಇದ್ದಾನೆಂದು ತಿಳಿಯಬಲ್ಲದು. ಹಾಗೆ ತಿಳಿದಾಗಲೇ ದೇವರು ತನ್ನ ಜ್ಞಾನವನ್ನು ಮೂರು ಗ್ರಂಥಗಳಾಗಿ ಬರೆಸಿದರೂ, ಎಲ್ಲದರಲ್ಲಿರುವುದು ಒಂದೇ ದೇವರ ಜ್ಞಾನವೆಂದು ಎಲ್ಲರಿಗೂ ರೂಢಿಯಾಗಿ ತಿಳಿಯಬಲ್ಲದು.

ಹಾಗೆ ತಿಳಿಯಲ್ಪಟ್ಟಾಗ ಮೊದಲು ದೈವಗ್ರಂಥವಾಗಿ ಭಗವದ್ಗೀತೆಯಲ್ಲಿ ಹೇಳಿದ ಜ್ಞಾನವೇ ಉಳಿದ ಗ್ರಂಥಗಳಲ್ಲಿ ಇದೆಯೆಂದು ತಿಳಿಯುತ್ತದೆ. ಆಗ ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನ ಕಾಣಿಸುತ್ತದೆ. ನನಗೆ ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವಿದೆಯೆಂದು ಅರ್ಥವಾಗುವುದರಿಂದ ಈದಿನ ನಾನು **"ತ್ರಿಮತ ಏಕೈಕ ಗುರು"**ವಾಗಿ ಪ್ರಜೆಗಳಿಂದ ಕರೆಯಲ್ಪಡುತ್ತಿದ್ದೇನೆ. ನಾನು ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವನ್ನು ತೋರಿಸುವುದರಿಂದ ಪ್ರಜೆಗಳು ಹಾಗೆ ನನ್ನನ್ನು ಕರೆಯುವುದು ನಡೆಯುತ್ತಿದೆ. ಅಷ್ಟೇ ಹೊರತು ವಾಸ್ತವವಾಗಿ ನಾನು ಗುರುವು ಅಲ್ಲ. ಭಗವದ್ಗೀತೆಯಲ್ಲಿ ವಿಭೂತಿ ಯೋಗದಲ್ಲಿ ಆರನೇ ಶ್ಲೋಕದಲ್ಲಿ ಹೇಳಿದ ವಿಧಾನವೇ ಉಳಿದ ಗ್ರಂಥಗಳಲ್ಲಿ ಹೇಳಿದ್ದರೂ ಅದನ್ನು ಮನುಷ್ಯರು ಸರಿಯಾಗಿ ಅರ್ಥ ಮಾಡಿಕೊಳ್ಳಲಾರದೆ ಹೋಗಿದ್ದಾರೆ. ವಿವರವಾಗಿ ಹೇಳಿದರೇ ಅಂತಿಮ ದೈವಗ್ರಂಥದಲ್ಲಿ ಸೂರಾ 2, ಆಯತ್ 117ರಲ್ಲಿ ಹೀಗೆ ಇದೆ ನೋಡಿರಿ.

(2–117) **“ಆತನು ಆಕಾಶಗಳನ್ನು ಮತ್ತು ಭೂಮಿಯನ್ನು ಯಾವ ನಮೂನೆ ಇಲ್ಲದೆ ಆರಂಭಿಸಿದ (ಸೃಷ್ಟಿಸಿದ) ವನು. ಮತ್ತು ಆತನು ಏನಾದರೂ ಮಾಡಬೇಕೆಂದು ನಿರ್ಣಯಿಸಿಕೊಂಡಾಗ ಅದನ್ನು ಕೇವಲ “ಆಗಿಹೋಗಲಿ” ಎಂದು ಆಜ್ಞಾಪಿಸುತ್ತಾನೆ. ಅಷ್ಟೇ ಅದು ಆಗಿಬಿಡುತ್ತದೆ.”** ಎಂದು ಇದೆ. ಇನ್ನೂ ಸೂರಾ 36, ಆಯತ್ 82ರಲ್ಲಿ ಹೀಗೆ ಇದೆ ನೋಡಿರಿ. **(36–82) “ನಿಶ್ಚಯವಾಗಿ ಆತನ ವಿಧಾನವೇನೆಂದರೇ ಆತನು ಏನಾದರೂ ಮಾಡಬೇಕೆಂದುಕೊಂಡಾಗ ಅದರಿಂದ “ಆಗಿಹೋಗಲಿ” ಎಂದು ಹೇಳುತ್ತಾನೆ, ಅಷ್ಟೇ! ಅದು ಆಗಿಬಿಡುತ್ತದೆ”.**

ಇಲ್ಲಿ ಹೇಳುವ ವಿಧಾನ ಬೇರೆಯಾದರೂ ವಿಷಯ ಮಾತ್ರ ಎಲ್ಲಾ ಒಂದೇ ಆಗುತ್ತದೆಂದು, ಭಗವದ್ಗೀತೆಯಲ್ಲಿ ಕೂಡಾ ಮನಸ್ಸಿನಲ್ಲಿ ಬಂದಿರುವ ಆಲೋಚನೆ ಮೂಲಕ ಸಮಸ್ತವೂ ಹುಟ್ಟುತಿದೆಯೆಂದು **“ಮದ್ಭಾವಾ ಮಾನಸಾ ಜಾತಾ”** ಎಂದು ಹೇಳಿದ್ದಾನೆ. ಇಲ್ಲಿ ಖುರಾನ್ ಗ್ರಂಥದಲ್ಲಿ ಕೂಡಾ **“ದೇವರು ‘ಆಗಿಹೋಗಲಿ’ ಎಂದರೆ ಆಗಿಹೋಗುತ್ತಿದೆಯೆಂದು”** ಹೇಳಿದ್ದಾರೆ. ದೇವರು ತನ್ನ ಮನಸ್ಸಿನಲ್ಲಿ ಅಂದುಕೊಂಡ ಸಂಕಲ್ಪ ಮುಖಾಂತರವೇ ಸಮಸ್ತವೂ ಹುಟ್ಟುತ್ತಿದೆಯೆಂದು ಹೇಳಿದ್ದಾನೆ. ಭಗವದ್ಗೀತೆಯಲ್ಲಿ ಹೇಳಿದಮಾತು, ಖುರಾನ್‌ನಲ್ಲಿ ಹೇಳಿದ ಮಾತು ಎರಡೂ ಒಂದೇ ಆಗಿವೆಯೆಂದು ಚೆನ್ನಾಗಿ ನೋಡುವವರಿಗೆ ತಪ್ಪದೆ ತಿಳಿಯುತ್ತದೆ. ಕುರುಡರಂತೆ ನೋಡುವವರಿಗೆ ಅದು ಬೇರೆಮಾತು ಇದು ಬೇರೆಮಾತಾಗಿ ಕಾಣಿಸುತ್ತಿರುತ್ತದೆ. **ದೇವರು ಒಬ್ಬನೇ, ದೇವರ ಜ್ಞಾನ ಒಂದೇ** ಆಗಿರುವುದರಿಂದ ಎರಡು ಗ್ರಂಥಗಳಲ್ಲಿ ಹೇಳಿದ ಮಾತು ಒಂದೇಯೆಂದು ಅರ್ಥವಾಗುತ್ತಿದೆ. ಅಷ್ಟೇ ಅಲ್ಲದೆ ಇದೇ ಮಾತು ಮತ್ತೊಂದು ವಿಧವಾಗಿ ದ್ವಿತೀಯ ದೈವಗ್ರಂಥವಾದ ಇಂಜೀಲ್‌ನಲ್ಲಿ (ಬೈಬಲ್‌ನಲ್ಲಿ) ಹೀಗೆ ಇದೆ. **(ಯೊಹಾನ 1–1,2) “ಆದಿಯಲ್ಲಿ ವಾಕ್ಯವಿದೆ. ವಾಕ್ಯವು ದೇವರ ಹತ್ತಿರವಿದೆ. ವಾಕ್ಯ ದೇವರಾಗಿದ್ದಾನೆ. ಆತನು ಆದಿಯಲ್ಲಿ ದೇವರ ಹತ್ತಿರ ಇದ್ದನು. ಸಮಸ್ತವನ್ನು ಆತನು ಮೂಲವಾಗಿ ಉಂಟಾಯಿತು.”** ಎಂದು ಇದೆ. ಇಲ್ಲಿ ಹೇಳಿದ ಭಾಷೆಯನ್ನು ಅನುಸರಿಸಿ ಭಗವದ್ಗೀತೆಯಲ್ಲಿ, ಖುರಾನಲ್ಲಿ, ಬೈಬಲ್‌ನಲ್ಲಿ ಬೇರೆಬೇರೆಯಾಗಿ

ಹೇಳಿರುವಂತೆ ಕಾಣಿಸುತ್ತಿದ್ದರೂ ಕೊನೆಗೆ ಭಾವನೆ ಒಂದೇಯೆಂದು ತಿಳಿಯುತ್ತಿದೆ. **"ಆತನು ಆದಿಯಲ್ಲಿ ದೇವರ ಹತ್ತಿರ ಇದ್ದನು"** ಎಂದಾಗ 'ಆತನು' ಅಂದರೆ ದೇವರ ಮನಸ್ಸೆಂದು, (ದೇವರ ಭಾವನೆಯೆಂದು) ಯಾರೂ ಗ್ರಹಿಸಲಾರದೆ ಹೋಗಿದ್ದಾರೆ. **"ಸಮಸ್ತವೂ ಆತನ ಮೂಲವಾಗಿ ಉಂಟಾಗಿದೆ"** ಎಂದು ಹೇಳಿದ್ದಾರೆಂದರೇ **'ದೇವರೊಂದರ ಮನೋ ಸಂಕಲ್ಪದ ಮೂಲಕ ಉಂಟಾಗಿದೆ'** ಎಂದು ಅರ್ಥ ಮಾಡಿಕೊಳ್ಳದೆಹೋಗಿದ್ದಾರೆ. ಈ ವಿಷಯ ಬೈಬಲ್ ಯೋಹಾನ್ ಸುವಾರ್ತೆಯಲ್ಲಿ ಮೊದಲ ಅಧ್ಯಾಯದಲ್ಲಿಯೇ ಒಂದು ಮತ್ತು ಎರಡು ವಾಕ್ಯಗಳಲ್ಲಿಯೇ ಈ ಮಾತನ್ನು ಹೇಳಿದರೂ ಯಾರೂ ಈ ವಿಷಯವನ್ನು ಗ್ರಹಿಸಲಾರದೆ ಹೋಗಿದ್ದಾರೆ. ಮೂರು ಗ್ರಂಥಗಳಲ್ಲಿ ಒಂದೇ ವಿಷಯವನ್ನು ಮೂರು ವಿಧಗಳಾಗಿ ಕಾಣಿಸುವಂತೆ ಹೇಳಿರುವುದರಿಂದ ಮನುಷ್ಯರು ಅದನ್ನು ಗ್ರಹಿಸಲಾರದೆಹೋಗಿದ್ದಾರೆ. ಸಮಸ್ತವು ಆತನ ಸಂಕಲ್ಪದ ಮೂಲಕವೇ ನಡೆಯುತ್ತದೆಂದು ಮೂರುಕಡೆ ಹೇಳುವುದಾಗಿದೆ. ಮೂರುಕಡೆ ಆತನ ಮಾತೇ ಸಮಸ್ತಕ್ಕು ಮೊದಲ ಬೀಜವಾಗಿ ಕೆಲಸ ಮಾಡಿದೆ. ದೇವರು ಸಂಕಲ್ಪಿಸಿದ ತಕ್ಷಣ ಆತನ ಸಂಕಲ್ಪವೇ ಮನುಷ್ಯರ ಜನ್ಮಗಳಿಗೆ ಕಾರಣವಾದ **"ಕರ್ಮ"**ವಾಗಿ ತಯಾರಾಗಿದೆಯೆಂದು ಅರ್ಥವಾಗುತ್ತಿದೆ. ಮನುಷ್ಯನ ಜನ್ಮಕ್ಕೆ ದೇವರ ಸಂಕಲ್ಪವೇ ಕರ್ಮವೆನ್ನುವ ಬೀಜವಾಗಿ ತಯಾರಾಗುತ್ತಿದೆ. ಆದ್ದರಿಂದ ಕರ್ಮ ಜನ್ಮಕ್ಕಿಂತ ಮೊದಲೆ ಇದೆಯೆಂದು ತಿಳಿಯುತ್ತಿದೆ. ಇದೇ ಯೋಹಾನ ಸುವಾರ್ತೆ ಒಂದನೆಯ ಅಧ್ಯಾಯದಲ್ಲಿ 10ನೇ ವಚನದಲ್ಲಿ ಹೀಗೆ ಇದೆ ನೋಡಿರಿ. **(ಯೋಹಾನ 1–10) "ಲೋಕವು ಆತನ ಮೂಲವಾಗಿ ಉಂಟಾಗಿದೆ. ಆದರೆ ಲೋಕವು ಆತನನ್ನು ತಿಳಿದುಕೊಳ್ಳಲಿಲ್ಲ"** ದೇವರು ಹೇಳಿದಂತೆ ದೇವರ ಮಾತೇ ಮನುಷ್ಯರಿಗೆ ಕರ್ಮವಾಗಿದೆಯೆಂದು, ಗಿಡಕ್ಕೆ ಬೀಜವಾಗಿದೆಯೆಂದು ತಿಳಿಯದೆ ಹೋಗಿದ್ದಾರೆ. ಇಂದಿಗಾದರೂ ಗಿಡಮೊದಲಾ? ಬೀಜಮೊದಲಾ? ಎನ್ನುವ ಪ್ರಶ್ನೆಗೆ ಬೀಜವೇ ಮೊದಲೆಂದು ತಿಳಿದಿದೆಯಾ? ಪ್ರಕೃತಿಯಲ್ಲಿನ ಪ್ರತಿ ಪ್ರಶ್ನೆಗು ಉತ್ತರವಿರುವಂತೆ ಈ ಪ್ರಶ್ನೆಗೂ ಸಹ ಉತ್ತರ ದೊರೆತಿದೆ.

**ಪ್ರಶ್ನೆ :– ಗಿಡದಿಂದ ತಯಾರಾದ ಬೀಜದಿಂದ ಪುನಃ ಹೊಸ ಗಿಡ ತಯಾರಾಗುವುದು ಕಾಣಿಸುತ್ತಿದೆ. ತಂದೆಯ ವೀರ್ಯಕಣದಿಂದ ಮತ್ತೊಂದು ಶಿಶು ಜನ್ಮ ಉಂಟಾ ಗುತ್ತಿರುವಂತೆ ತಿಳಿಯುತ್ತಿದೆ. ಈ ಕಾಣಿಸುವ ವಿಷಯಗಳನ್ನು ಬಿಟ್ಟು ಕಾಣಿಸದ ನಿಮ್ಮ ಮಾತನ್ನು ನಂಬುವುದು ಬಹಳಜನರಿಗೆ ಕಷ್ಟವಾಗಿರಬಹುದು. ಪ್ರಸ್ತುತ ನಡೆಯುತ್ತಿರುವುದೇ ಮನುಷ್ಯರು ಮಾಡುತ್ತಾರೆ ಆದರೆ, ಯಾವಾಗೋ ಪೂರ್ವದಲ್ಲಿ ಎಲ್ಲದಕ್ಕಿಂತ ಮೊದಲು ಬೀಜವೇ ಎಂದು ಹೇಳಿದರೂ ಕಾಣಿಸುವ ಸತ್ಯವನ್ನು ಬಿಟ್ಟು, ಕಾಣಿಸದಿರುವುದು ಸತ್ಯವೋ ಅಲ್ಲವೋ ಎನ್ನುವಂತಿರುತ್ತಾರೆ. ಅಂತಹವರನ್ನು ನಂಬುವುದಕ್ಕೆ ಇನ್ನೂ ಏನಾದರೂ ವಿವರವಾಗಿ ಹೇಳುತ್ತೀರ?**

**ಉತ್ತರ :–** ಇಲ್ಲಿಯವರೆಗೂ ವಿವರವವಾಗಿಯೇ ಹೇಳಿದ್ದೇವೆ. ಇನ್ನೂ ವಿವರವಾಗಿ ಎಂದರೆ ಅದಕ್ಕೆ ಅತಿ ಮಿತಿ ಏನೂ ಇಲ್ಲ. ಪ್ರಾಣವಿರುವವನಿಗೆ ಪ್ರಾಣ ಇದೆಯೋ ಇಲ್ಲವೋ ನಾವು ಹೇಗೆ ನಂಬಬೇಕು? ಹೊರಗಿರುವುದನ್ನು, ಕಾಣಿಸುವುದನ್ನು ನಂಬುತ್ತೇವೆ ಆದರೆ, ಒಳಗಿರುವುದನ್ನು ಕಾಣಿಸದಿರುವುದನ್ನು ನಾವು ಹೇಗೆ ನಂಬಬೇಕು? ಎಂದು ಕೇಳಿದರೆ ಅದನ್ನು ನಂಬಿಸುವುದಕ್ಕೆ ಹೇಳುವವನು ಮರಣಿಸಿ ತೋರಿಸಿದರೂ, ಬದುಕಿದ್ದು ತೋರಿಸಿದ್ದರೇ ನಂಬುತ್ತಿದ್ದೆ. ಮರಣಿಸಿದ ನಂತರ ನಾನೇಕೆ ನಂಬಬೇಕು? ಎನ್ನುವವರಿಗೆ ಹೇಳುವುದಕ್ಕಿಂತ ಸುಮ್ಮನಿರುವುದು ಒಳ್ಳೆಯದು. ಅಂತಹವರಿಗೆ ಇತರರು ಏನು ಉತ್ತರ ಹೇಳದಿದ್ದರೂ, ನಿನಗೆ ಮಾತ್ರವೇ ನಾನು ಸ್ವಲ್ಪಮಟ್ಟಿಗೆ ಉತ್ತರವನ್ನು ಹೇಳುತ್ತೇನೆ. ಈಸಲ ನಾನು ಹೇಳುವ ಉತ್ತರ ನಿನಗೆ ಪ್ರಶ್ನಾರ್ಥಕವಾಗಿ ಇನ್ನೊಂದುಸಲ ಇಂತಹ ಪ್ರಶ್ನೆ ಕೇಳಬಾರದೆನಿಸುತ್ತದೆ. ಈಗ ನಾನು ಹೇಳುವಂತಹ ಉತ್ತರವನ್ನು ಜಾಗ್ರತರಾಗಿ ಕೇಳಿ ಇನ್ನೂ ಏನಾದರೂ ಪ್ರಶ್ನೆ ಬಂದರೆ ಕೇಳಬಹುದು.

**ಯೋಗಿ :–** ಯಾವಾಗಲೊ ಪೂರ್ವವಿರುವ ಉತ್ತರವನ್ನು ನಾವು ಹೇಗೆ ನಂಬಬೇಕು? ಈಗಿರುವುದನ್ನು, ಕಾಣಿಸುವುದನ್ನೇ ನಾವು ನಂಬುತ್ತೇವೆ ಎಂದು ಹೇಳಿದ್ದೀಯಾ. ಈಗ ನಿಮಗೆ ಕಾಣಿಸುವುದು ಯಾವುದೊ ಹೇಳುತ್ತಿಯಾ? ನೀನು ಯಾರ ಮಗನೋ ಹೇಳುತ್ತೀಯಾ?

**ಭೋಗಿ :–** ಇದೇನು ಪ್ರಶ್ನೆ! ನಾನು ಯಾರ ಮಗನೊ ನನಗೆ ತಿಳಿದಿದೆ. ಉಳಿದವರಿಗೆ ಕೂಡಾ ತಿಳಿದಿದೆ. ನನ್ನ ತಾಯಿ ತಂದೆಯವರು ಎದುರುಗಡೆ ಕಾಣಿಸುತ್ತಿದ್ದರೆ ನನ್ನ ತಾಯಿ ತಂದೆಯರ್‍ಯಾರೋ ಇತರರಿಗೆ ನಾನು ಹೇಳದೆಯೇ ತಿಳಿಯುತ್ತಿದ್ದರೆ ನೀವು ಈ ಪ್ರಶ್ನೆ ಕೇಳುವುದು ಹಾಸ್ಯವಾಗಿ ಕಾಣಿಸುತ್ತಿದೆ. ಈ ಪ್ರಶ್ನೆಯನ್ನು ಕೇಳುತ್ತಲೇ ಯಾರಾದರೂ ನಗುತ್ತಾರೆ!

**ಯೋಗಿ :–** ನನ್ನ ಪ್ರಶ್ನೆಗೆ ಎಲ್ಲರೂ ನಕ್ಕಿದರೂ ಫರವಾಗಿಲ್ಲ, ನೀವು ಉತ್ತರ ಹೇಳಬಲ್ಲಿರಾ? ಹೇಳಿದರೆ ನಿನ್ನ ತಂದೆ ಯಾರೋ ಹೇಳುತ್ತೀಯಾ? ಹಾಗೆ ನಿನ್ನ ತಾಯಿ ಯಾರೋ ಹೇಳುತ್ತೀಯಾ?

**ಭೋಗಿ :–** ಎದುರುಗಡೆ ಕಾಣಿಸುವ ವೆಂಕಯ್ಯನೇ ನನ್ನ ತಂದೆ. ಹಾಗೆಯೇ ಇಲ್ಲಿಯೇ ಕಾಣಿಸುವ ಮಂಗಮ್ಮನೇ ನನ್ನ ತಾಯಿ. ಇನ್ನೇನು ಸರಿಹೋಗಿದೆಯಾ? ಇನ್ನು ಏನಾದರೂ ಹೇಳಬೇಕಾ?

**ಯೋಗಿ :–** ಸರಿಹೋಗಲಿಲ್ಲ. ನೀನು ಇನ್ನು ಹೇಳಬೇಕಾಗಿರುವ ಉತ್ತರ ಉಳಿದೇ ಇದೆ. ವೆಂಕಯ್ಯನೇ ನಿನ್ನ ತಂದೆಯೆಂದು ಹೇಗೆ ಹೇಳುತ್ತಿಯಾ? ಮಂಗಮ್ಮನೇ ನಿನ್ನ ತಾಯಿಯೆಂದು ಹೇಗೆ ಹೇಳುತ್ತಿಯಾ? ಅವರೇ ನಿನ್ನ ತಾಯಿ ತಂದೆಯೆಂದು ಹೇಳುವುದಕ್ಕೆ ನಿನ್ನ ಹತ್ತಿರ ಆಧಾರ ಏನಾದರೂ ಇದೆಯಾ?

**ಭೋಗಿ :–** ಮೊದಲಿನಿಂದ, ನನ್ನ ಚಿಕ್ಕಂದಿನಿಂದ ಇವರನ್ನೇ ತಾಯಿತಂದೆಯರಾಗಿ ಕರೆಯುತ್ತಿದ್ದೇನೆ. ಈ ವಿಷಯ ಎಲ್ಲರಿಗೂ ತಿಳಿದಿದೆ. ಅದಕ್ಕಿಂತ ಆಧಾರ ಇನ್ನೇನು ಬೇಕು?

**ಯೋಗಿ :–** ನಿನ್ನ ಚಿಕ್ಕಂದಿನಿಂದ ನೀನು ತಾಯಿ ತಂದೆ ಎಂದುಕೊಂಡವರೇ ತಾಯಿ ತಂದೆಯಾದರೆ ಕೃಷ್ಣನು ಕೂಡಾ ಚಿಕ್ಕಂದಿನಿಂದ ಯಶೋದೆಯನ್ನು ತಾಯಿಯಾಗಿ, ನಂದನನ್ನು ತಂದೆಯಾಗಿ ಕರೆದಿದ್ದಾನೆ. ಹಾಗೆ ಕರೆದಷ್ಟು ಮಾತ್ರಕ್ಕೆ ಯಶೋದ, ನಂದರು ಕೃಷ್ಣನ ತಾಯಿ ತಂದೆಯರು ಆಗಲಿಲ್ಲವಲ್ಲವೇ! ಅವರು ತಾಯಿ ತಂದೆ ಅಲ್ಲವೆಂದು ತಿಳಿದಿದೆ. ನೀನು ನಿನ್ನ ತಾಯಿ ತಂದೆಯೆಂದು

ಅಂದುಕೊಂಡವರು ಕೆಲವುದಿನಗಳಿಗೆ ನಿನ್ನ ತಾಯಿ ತಂದೆ ಅಲ್ಲವೆಂದು ತಿಳಿದುಹೋಗಬಹುದು. ಎಷ್ಟೋ ಜನ ತಾಯಿ ತಂದೆಯರಿಗೆ ಸಾಕಿದ ಮಕ್ಕಳಿರುವುದು ನಿನಗೆ ತಿಳಿದಿದೆ. ಹಾಗಿರುವಾಗ ಇವರೇ ನಿನ್ನ ತಾಯಿ ತಂದೆಯರೆಂದು ನೀನು ಹೇಳಿದರೂ ನಾವು ಹೇಗೆ ನಂಬಬೇಕು?

**ಭೋಗಿ :–** ನಾನು ಹೇಳುವ ಮಾತನ್ನು ನಂಬಲಾರದೆಹೋದರೆ ನನ್ನ ತಾಯಿತಂದೆಯರನ್ನು ಈತನು ನಿಮ್ಮ ಕುಮಾರನಾ? ಎಂದು ಕೇಳಿರಿ. ಅವರೇ ನಿಮಗೆ ಬೇಕಾದ ಸತ್ಯವನ್ನು ಹೇಳುತ್ತಾರೆ. ಹಾಗಾದರೂ ನೀವು ನಂಬಬಹುದು.

**ಯೋಗಿ :–** ನಿಮ್ಮ ತಾಯಿ ತಂದೆ ಈತನೇ ನಮ್ಮ ಕುಮಾರನೆಂದು ಹೇಳಿದರೂ ನಾವು ಹೇಗೆ ನಂಬಬೇಕು? ನಿಜವಾಗಲು ಅವರಿಗೆ ನೀನು ಹುಟ್ಟಿದ್ದಿಯೋ ಇಲ್ಲವೋ, ಅವರು ನಿನ್ನನ್ನು ಇತರರಿಂದ ತಂದುಕೊಂಡು ಬೆಳೆಸಿರಬಹುದಲ್ಲವೆ. ಆ ವಿಷಯವನ್ನು ಹೊರಗೆ ಹೇಳಿದರೆ ಇಲ್ಲಿಯವರೆಗೂ ಇರುವ ತಮ್ಮ ಕುಮಾರನು ಅವರನ್ನು ಬಿಟ್ಟು ಹೋಗುತ್ತಾನೇನೋ ಎಂಬ ಭಯದಿಂದ ಅವರು ಕೂಡಾ ಸುಳ್ಳನ್ನೇ ಹೇಳಬಹುದಲ್ಲವೆ!

**ಭೋಗಿ :–** ಆದರೆ ನಿನಗೆ ತಿರುಗಿಲ್ಲದ ಒಂದು ಸಾಕ್ಷಿಯನ್ನು ಹೇಳುತ್ತೇನೆ. ಪ್ರಸವ ಸಮಯದಲ್ಲಿ ನಮ್ಮ ತಾಯಿದು ಕಷ್ಟದ ಹೆರಿಗೆ ಆಗಿರುವುದರಿಂದ ಆಸ್ಪತ್ರೆ ಆಪರೇಷನ್ ಥಿಯೇಟರ್‌ನಲ್ಲಿ ನಡೆಯುವುದೆಲ್ಲ ವೀಡಿಯೊ ತೆಗೆಯುವುದು ನಡೆದಿದೆ. ನಂತರ ಆಕೆ ಮರಣಿಸಿದರೂ ತಮ್ಮ ತಪ್ಪು ಏನು ಇಲ್ಲವೆಂದು ಇತರರಿಗೆ ತಿಳಿಸುವುದಕ್ಕೆ, ಡಾಕ್ಟರ್ಸ್ ಮೇಲಿನ ಆಫೀಸರ್‌ಗಳಿಗೆ ತೋರಿಸುವುದಕ್ಕೆ ವೀಡಿಯೊ ತೆಗೆಯುವುದು ನಡೆದಿದೆ. ದೇವರ ದಯೆಯಿಂದ ಪ್ರಸವ ಪ್ರಮಾದ ಇಲ್ಲದಂತೆ ನಡೆದಿದೆ. ನಾನು ಹುಟ್ಟಿದಾಗ ಸುಮಾರು ಅರ್ಧಗಂಟೆವರೆಗು ಸ್ಪೃಹದೊಳಗೆ ಬರಲಿಲ್ಲವಂತೆ. ಆದ್ದರಿಂದ ಹುಟ್ಟಿದ ತಕ್ಷಣ ಕಿರುಚಲಿಲ್ಲವೆಂದು ನನ್ನನ್ನು ಸಹ ವಿಡಿಯೊ ತೆಗೆದಿದ್ದಾರೆ. ಅಷ್ಟೇ ಅಲ್ಲದೆ ನನ್ನ ಶರೀರದಲ್ಲಿ ಹೊಟ್ಟೆಯ ಮೇಲೆ ರೂಪಾಯಿ ಹಗಲವಿರುವ ಹುಟ್ಟುಮಚ್ಚೆಯನ್ನು ಆಗಲೇ ನೋಡಿ ಅದನ್ನು ಕೂಡಾ ವೀಡಿಯೊ ತೆಗೆಯುವುದು ನಡೆದಿದೆ. ಆಗ ಎಲ್ಲರೂ

ನೋಡಿದ ಹುಟ್ಟುಮಚ್ಚೆಯೇ ಈದಿನ ನನ್ನ ಹೊಟ್ಟೆಮೇಲೆ ನೋಡಬಹುದು. ಪೂರ್ತಿ ವೀಡಿಯೊ ದೃಶ್ಯ ಸಾಕ್ಷಿಯಾಗಿ ಇರುವುದರಿಂದ ನೀವು ಅನುಮಾನಿಸುವುದಕ್ಕೆ ಅವಕಾಶವೇ ಇಲ್ಲ. ವೀಡಿಯೊ ದೃಶ್ಯದಿಂದ ವೆಂಕಯ್ಯ, ಮಂಗಮ್ಮನವರೇ ನನ್ನ ತಾಯಿ ತಂದೆಯೆಂದು ಧೈರ್ಯವಾಗಿ ಹೇಳುತ್ತಿದ್ದೇನೆ. ಈಗ ನನ್ನ ಮಾತನ್ನು ಅಲ್ಲವೆನ್ನುವುದಿಲ್ಲ ಅಲ್ಲವೆ!

**ಯೋಗಿ :–** ವೀಡಿಯೊ ದೃಶ್ಯವನ್ನು ಸಾಕ್ಷಿಯಾಗಿ ತೋರಿಸಿ ನೀನು ನಿನ್ನ ತಾಯಿಯನ್ನು ತೋರಿಸಬಹುದು ಆದರೆ, ನಿನ್ನ ತಂದೆ ಯಾರೋ ಖಚಿತವಾಗಿ ಹೇಳಲಾರೆ. ಇಂತಹವನು ನನ್ನ ತಂದೆಯೆಂದು ಹೇಳುವುದಕ್ಕೆ ಸಾಕ್ಷಿ ಯಾರ ಹತ್ತಿರವೂ ಇಲ್ಲ. ಆದ್ದರಿಂದ ಈಗಲೂ ಸಹ ನಿನ್ನ ತಂದೆ ಯಾರು? ಎಂದು ನಾನು ನಿನ್ನನ್ನು ಪ್ರಶ್ನಿಸುತ್ತಿದ್ದೇನೆ. ನಾನು ಎಷ್ಟೋ ವಿವರವಾಗಿ ಬೀಜವನ್ನು ಕುರಿತು, ಗಿಡವನ್ನು ಕುರಿತು ಹೇಳಿದರೂ, ಸಂಪೂರ್ಣ ಉತ್ತರವಿದ್ದರೂ ನೀನು ಅದೇ ಕೆಲಸವಾಗಿ ಪ್ರಶ್ನಿಸಿದ್ದೀಯಾ. ಈಗ ನಾನು ಹಾಗಲ್ಲದೆ ಸಂಪೂರ್ಣವಾದ ಉತ್ತರ ದೊರೆತಾಗ ತಪ್ಪದೆ ನಾನು ಒಪ್ಪಿಕೊಳ್ಳುತ್ತೇನೆ. ಪುನಃ ಅನವಶ್ಯವಾಗಿ ಪ್ರಶ್ನಿಸುವುದಿಲ್ಲ. ಆದರೇ ನೀನು ಸರಿಯಾದ ಉತ್ತರ ಹೇಳುವವರೆಗು ನಾನು ಪ್ರಶ್ನಿಸುವುದು ತಪ್ಪುವುದಿಲ್ಲ. ನಿನ್ನ ತಂದೆಯನ್ನು ಕುರಿತು ಸಂಪೂರ್ಣ ಉತ್ತರ ನಿನ್ನ ಹತ್ತಿರ ಇದೆಯಾ?

**ಭೋಗಿ :–** ಮಗುವಿಗೆ ತಂದೆ ಯಾರು? ಎನ್ನುವ ವಿಷಯ ತಾಯಿಗೆ ಮಾತ್ರ ತಿಳಿದಿದೆಯೆಂದು ದೊಡ್ಡವರು ಹೇಳುತ್ತಿರುತ್ತಾರೆ. ನನ್ನ ತಂದೆ ಯಾರೋ ನನ್ನ ತಾಯಿಯನ್ನು ಈಗಲೇ ಕೇಳಿ ತಿಳಿದುಕೊಳ್ಳುತ್ತೇನೆ. ನನ್ನ ತಂದೆ ಯಾರೆನ್ನುವುದು ನನ್ನ ತಾಯಿ ಹೇಳುವ ಮಾತೇ ಪ್ರಪಂಚಕ್ಕೆ ಪೂರ್ತಿ ಸಾಕ್ಷಿ. ಆದ್ದರಿಂದ ನಿನಗೆ ಸರಿಯಾದ ಉತ್ತರವನ್ನು ಈಗಲೇ ಹೇಳುತ್ತೇನೆ. ಎರಡು ನಿಮಿಷಗಳಲ್ಲಿ ಸತ್ಯ ತಿಳಿದುಹೋಗುತ್ತದೆ ಅಲ್ಲವೆ!

**ಯೋಗಿ :–** ನಿಮ್ಮ ದೃಶ್ಯಗಳು, ನಿಮ್ಮ ಯೋಚನೆಗಳು ಎಲ್ಲಾ ತಪ್ಪುದಾರಿಯಲ್ಲಿ

ನಡೆಯುತ್ತಿರುವಾಗ ಸರಿಯಾದ ಉತ್ತರ ದೊರೆಯುತ್ತದೆಂದು ಹೇಳುವುದು ಹಾಸ್ಯಾಸ್ಪದವಾಗಿರುತ್ತದೆ. ಸರಿ! ಸತ್ಯವೇನೊ ಹೇಳಿದರೆ ಸಂತೋಷ, ಹೇಳಿರಿ ನೋಡೋಣ.

**ಭೋಗಿ :–** ನನ್ನ ವಿಷಯದಲ್ಲಿ ನನ್ನ ತಾಯಿ ಅಸತ್ಯ ಹೇಳಬೇಕಾದ ಅವಶ್ಯಕತೆ ಇಲ್ಲ. ಇರುವ ಸತ್ಯ ಆಕೆಗೆ ತಿಳಿದಿದೆ ಆದ್ದರಿಂದ ಆಕೆ ನನ್ನ ತಂದೆ ವೆಂಕಯ್ಯನೆಂದು ಹೇಳಿದ್ದಾಳೆ. ನಮ್ಮ ತಾಯಿ ಕಳಂಕವಿಲ್ಲದ ಜೀವನವನ್ನು ಕಳೆದಿದ್ದಾಳೆ. ಆಕೆ ನನ್ನ ತಾಯಿಯೆಂದು ಹೇಳಿಕೊಳ್ಳುವುದಕ್ಕೆ ನಾನು ಗರ್ವಿಸುತ್ತಿದ್ದೇನೆ. ನಮ್ಮ ತಾಯಿ ಉತ್ತಮಳೆಂದು ಒಳ್ಳೆಯ ಹೆಸರನ್ನು ತಂದುಕೊಂಡಿದ್ದಾಳೆ. ಈಗ ನಮ್ಮ ತಾಯಿ ಹೇಳಿರುವುದು ಸತ್ಯವೆಂದು ವೆಂಕಯ್ಯ ನನ್ನ ತಂದೆಯೆಂದು ನಮ್ಮ ತಾಯಿಯಿಂದ ತಿಳಿದುಕೊಂಡು ಹೇಳುತ್ತಿದ್ದೇನೆ. ಯಾರಾದರೂ ಅವರ ತಂದೆಯನ್ನು ಕುರಿತು ಈತನೇ ನಿಮ್ಮ ತಂದೆಯೆಂದು ತಾಯಿಯೇ ಹೇಳಬೇಕಾಗಿರುತ್ತದೆ. ಆದ್ದರಿಂದ ಎಲ್ಲರಿಗೂ ತಾಯಿಯ ಮಾತೇ ಆಧಾರ. ಈಗ ನಿಮಗೆ ಸಂಪೂರ್ಣವಾದ ಉತ್ತರ ದೊರೆತಿದೆಯೆಂದು ಅಂದುಕೊಳ್ಳುತ್ತೇನೆ.

**ಯೋಗಿ :–** ವೆಂಕಯ್ಯ ನಿನ್ನ ತಂದೆಯೆಂದು ನೀನು ನಂಬಬಹುದು. ನಿನ್ನ ತಂದೆಯನ್ನು ಕುರಿತು ಸತ್ಯ ತಾಯಿ ಹೊರತು ಯಾರೂ ಹೇಳಲಾರರು ಎಂಬಮಾತು ಸತ್ಯವೇ! ಆದರೇ ನಿನ್ನ ತಂದೆ ಯಾರೋ ಮುಂಚೆಯೇ ನನಗೆ ತಿಳಿದಿರುವುದರಿಂದ ನೀನು ನಿನ್ನ ತಂದೆ ವೆಂಕಯ್ಯ ಎಂದು ಹೇಳಿದರೂ ನಾನು ನಂಬುವುದಿಲ್ಲವೆಂದರೆ ನಂಬುವುದಿಲ್ಲ. ಒಂದುವೇಳೆ ನಿನ್ನ ಮಾತನ್ನು ನಾನು ಒಪ್ಪಿಕೊಂಡರೆ ನಾನು ದೇವರ ಮಾತನ್ನು ಲೆಕ್ಕಮಾಡದವನಾಗುತ್ತೇನೆ.

**ಭೋಗಿ :–** ನೀನು ವಿಚಿತ್ರವಾಗಿ ಮಾತನಾಡುತ್ತಿದ್ದೀಯಾ. ತಂದೆಯನ್ನು ಕುರಿತು ತಾಯಿ ಹೇಳಿದ ಸತ್ಯವನ್ನು ಎಲ್ಲರೂ ಕೇಳಬೇಕಾಗಿರುವಾಗ, ನೀನು ಅದೇ ಕೆಲಸವಾಗಿ ಅಡ್ಡವಾಗಿ ಮಾತನಾಡುತ್ತಿದ್ದೀಯಾ. ಅಸಲು ನಿನ್ನ ಉದ್ದೇಶ ಏನು? ನನ್ನ ತಂದೆ ಯಾರೋ ನಿನಗೆ ಮುಂಚೆಯೇ ತಿಳಿದಿದೆ ಎಂದು ಹೇಳುವುದೇನು?

ತಂದೆಯ ರಹಸ್ಯ ತಾಯಿಗೆ ಹೊರತು ಯಾರಿಗೂ ತಿಳಿಯದೆಂದಾಗ ಮಧ್ಯದಲ್ಲಿ ನಿನಗೆ ತಿಳಿಯುವುದೇನು?

**ಯೋಗಿ :–** ನೀನು ಕಾಣಿಸುವವನನ್ನೇ ತಂದೆಯೆಂದು ನಂಬುತ್ತಿದ್ದೀಯಾ. ಒಬ್ಬ ಮನುಷ್ಯ ಹುಟ್ಟಿದರೇ ಅವನಿಗೆ ಬೀಜದಾತನಾದವನೇ ತಂದೆಯಾಗುತ್ತಾನೆ. ಇದು ಎಲ್ಲರೂ ಒಪ್ಪಿಕೊಳ್ಳುವ ಸತ್ಯವೇ. ಕಾಣಿಸುವ ವೆಂಕಯ್ಯನೇ ನನ್ನ ತಂದೆಯೆಂದು ಅಂದುಕೊಳ್ಳುತ್ತಿದ್ದೀಯಾ. ವೆಂಕಯ್ಯ ಬೀಜಕ್ಕೇ ನೀನು ಹುಟ್ಟಿದ್ದೀಯ? ಎಂದು ನಿನ್ನನ್ನು ಕೇಳಿದರೇ ನಿನ್ನ ತಾಯಿ ಹೇಳಿರುವುದನ್ನನುಸರಿಸಿ ವೆಂಕಯ್ಯನೇ ನನ್ನ ತಂದೆಯೆಂದು ಹೇಳುತ್ತಿದ್ದೀಯ. ಆದರೇ ವೆಂಕಯ್ಯನಿಗೆ ಬೀಜವೇ ಇಲ್ಲದಿರುವಾಗ ಆತನು ನಿನ್ನ ತಂದೆ ಹೇಗಾಗುತ್ತಾನೆ? ಈ ಪ್ರಪಂಚದಲ್ಲಿ ಪುರುಷನು ಒಬ್ಬನೇ ಇದ್ದಾನೆ. ಆತನೇ ಪರಮಾತ್ಮ ಅಥವಾ ಅಲ್ಲಾ ಅಥವಾ ಎಹೋವಾಯೆಂದು ಯಾವ ಹೆಸರಿನಿಂದಾದರೂ ಹೇಳಬಹುದು. ಶರೀರವು ಪುರುಷಾಕಾರದಲ್ಲಿ ಇರುವಷ್ಟುಮಾತ್ರಕ್ಕೆ ವೆಂಕಯ್ಯ ಪುರುಷನು ಅಲ್ಲ. ವೆಂಕಯ್ಯ ಪ್ರಕೃತಿಯಿಂದ ತಯಾರಾದ ಶರೀರದಿಂದ ಇದ್ದಾನಾದ್ದರಿಂದ ಆತನನ್ನು ಸ್ತ್ರೀ ಕೆಳಗೆ ಲೆಕ್ಕಿಸಬೇಕು.

**ಭೋಗಿ :–** ತಂದೆ ವೀರ್ಯಕಣದಿಂದಲೇ ಶಿಶುವು ಜನ್ಮಿಸುತ್ತಿದೆಯೆಂದು ಈದಿನ ವಿಜ್ಞಾನ (ಸೈನ್ಸ್) ಹೇಳುತ್ತಿರುವಾಗ, ಪುರುಷರು ಯಾರೂ ಅಲ್ಲವೆಂದು ಹೇಳುವುದೇನು? ನಾನು ವೆಂಕಯ್ಯ ವೀರ್ಯಕಣದಿಂದ ಹುಟ್ಟಿದ್ದೇನೆ ಆದ್ದರಿಂದ ಆತನನ್ನು ಸೈನ್ಸ್ ಪ್ರಕಾರ ತಂದೆಯೆಂದು ಹೇಳುತ್ತಿದ್ದೇನೆ.

**ಯೋಗಿ :–** ಪ್ರಪಂಚಕ್ಕೆಲ್ಲ ಪುರುಷನು ಒಬ್ಬನೇ ಇದ್ದಾನೆ. ಆತನೇ ಎಲ್ಲರಿಗೂ ನಿಜವಾದ ತಂದೆ. ಹೊರಗೆ ಕಾಣಿಸುವ ಮನುಷ್ಯನನ್ನು ತಂದೆಯಾಗಿ ಲೆಕ್ಕಿಸಿಕೊಳ್ಳುವುದು ತಪ್ಪಾಗುತ್ತದೆ. **ಯಾರಿಗಾದರೂ ತಂದೆ ಪರಮಾತ್ಮ (ಅಲ್ಲಾ) ಅಥವಾ ಎಹೋವಾನೇ** ಎಂದು ಹೇಳಬಹುದು. ಯಾರೇ ಆಗಲಿ ತಂದೆ ವೀರ್ಯಕಣದಿಂದ ಹುಟ್ಟಲಿಲ್ಲ. ಹಾಗೆ ಹೇಳಿದರೆ ಪುರುಷ ಸ್ಪರ್ಶ ಇಲ್ಲದ

ಸ್ತ್ರೀಯರು ಬಹಳಜನ ಗರ್ಭ ಧರಿಸುವುದರಲ್ಲಿ ಉತ್ತರ ಇಲ್ಲದಂತೆ ಹೋಗುತ್ತದೆ. ಈದಿನ ಎಷ್ಟೋ ಜನ ಪರಿಶೋಧಕರ ಪರಿಶೋಧನೆಗಳಲ್ಲಿ ಕೂಡ ಪುರುಷನ ವೀರ್ಯಕಣ ಇಲ್ಲದೆಯೇ ಬಹಳಜನರಿಗೆ ಸಂತಾನ ಉಂಟಾಗುತ್ತಿದೆಯೆಂದು ನಿರ್ಣಯಿಸಿ ಹೇಳಿದ್ದಾರೆ. ಮದುವೆ ಆಗದವರು, ಪತಿ ಸಂಬಂಧ ಇಲ್ಲದವರು ಬಹಳಜನ ಗರ್ಭಧರಿಸಿ ಮಕ್ಕಳನ್ನು ಹೆತ್ತ ಚರಿತ್ರೆಗಳು ಗತಕಾಲದಲ್ಲಿ ಕಳೆದುಹೋ ಗಿವೆ. ಪ್ರವಕ್ತನಾದ ಯೇಸು ಕೂಡಾ ಕನ್ಯೆಗೆ ಹುಟ್ಟಿದವೇನೆಯೆಂದು ಮರೆಯ ಬಾರದು. ಪ್ರಪಂಚದಲ್ಲಿ ಎಲ್ಲರ ಹುಟ್ಟುವಿಕೆಗೂ ನಾನೇ ಕಾರಣವೆಂದು, ನಾನೇ ಬೀಜದಾತನೆಂದು ಹೇಳಿದ ಮಾತು ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗ ಯೋಗದಲ್ಲಿ ಮೂರು, ನಾಲ್ಕು ಶ್ಲೋಕಗಳಲ್ಲಿ ಇದೇ ವಿಷಯವಿದೆ ನೋಡಿರಿ.

**3ನೇ ಶ್ಲೋ॥ ಮಮ ಯೋನಿ ರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್।**
**ಸಂಭವ ಸ್ಸರ್ವ ಭೂತಾನಾಂ ತತೋ ಭವತಿ ಭಾರತ! ॥**

**ಭಾವಾರ್ಥ :– "ಈ ಪ್ರಕೃತಿ ನನ್ನೊಂದರ ಪತ್ನಿಯಾಗಿದ್ದು ನಾನು ಬೀಜದಾತನಾದ ಪತಿಯಾಗಿ ಇದ್ದೇನೆ. ನಮ್ಮಿಂದಲೇ ಸಕಲ ಜೀವರಾಶಿಗಳು ಉದ್ಭವಿಸುತ್ತಿವೆ."**

**4ನೇ ಶ್ಲೋ॥ ಸರ್ವಯೋನಿಷು ಕೌಂತೇಯ! ಮೂರ್ತಯಃ ಸಂಭವಂತಿ ಯಾಃ।**
**ತಾಸಾಂ ಬ್ರಹ್ಮ ಮಹಾದ್ಯೋನಿಃ ಅಹಂ ಬೀಜಪ್ರದಃ ಪಿತಾ॥**

**ಭಾವಾರ್ಥ :– "ಸರ್ವ ಗರ್ಭಗಳಲ್ಲಿ ಜನ್ಮಿಸುವ ಸಕಲ ಜೀವರಾಶಿಗಳಿಗೆ ತಾಯಿ ಪ್ರಕೃತಿಯಾಗಿದ್ದು, ತಂದೆಯು ಬೀಜದಾತನಾಗಿ ನಾನೇಯೆಂದು (ದೇವರೇಯೆಂದು) ತಿಳಿಯಬೇಕು."**

ಭಗವದ್ಗೀತೆಯಲ್ಲಿ ಈ ಮಾತುಗಳನ್ನು ನೋಡಿ ನಂತರ ಎಲ್ಲರಿಗೂ ತಂದೆ ದೇವರೇ ಎಂದು ಹೇಳದೆ ತಪ್ಪುವುದಿಲ್ಲ. ಈ ಆತ್ಮಜ್ಞಾನ ತಿಳಿಯದವರು ಕಾಣಿಸುವವರನ್ನೇ ತಾಯಿತಂದೆಯಾಗಿ ಲೆಕ್ಕಿಸಿ ನಿಜವಾದ ತಾಯಿತಂದೆಯನ್ನು ಮರೆತುಹೋಗಿದ್ದಾರೆ. ದೈವಜ್ಞಾನ ತಿಳಿದವರಿಗೆ ನಿಜವಾದ ತಾಯಿತಂದೆಯರನ್ನು ಕುರಿತು ತಿಳಿಯುತ್ತದೆ. ನಿನಗೆ ದೈವಜ್ಞಾನ ತಿಳಿಯದಿರುವುದರಿಂದ ಕಾಣಿಸುವ

ತಾಯಿಯನ್ನು ತಂದೆಯನ್ನು ಹೇಳುತ್ತಿದ್ದೀಯ. ಅವರು ನಿನಗೆ ಅಸಲಾದ ತಾಯಿ ತಂದೆಯರು ಅಲ್ಲವೆಂದು ತಿಳಿದಿಲ್ಲ. ನಿನ್ನ ತಾಯಿ ತಂದೆಯರು ಯಾರಾಗಿರುವುದು ನನಗೆ ತಿಳಿದಿದೆ ಆದ್ದರಿಂದ ನೀವು ಏನು ಹೇಳಿದರೂ ನಾನು ಕೇಳುವುದಿಲ್ಲ. ಪ್ರಪಂಚಕ್ಕಿಂತ ಮೊದಲೇ ದೇವರು ಇದ್ದಾನೆ, ಆದ್ದರಿಂದ ಸೃಷ್ಟಿಗೆ ಬೀಜವಾಗಿರುವ ದೇವರು ಮುಂದಿರುವಾಗ ಸಕಲ ಸೃಷ್ಟಿ ನಂತರ ತಯಾರಾಗಿದೆ. ಆದುದರಿಂದ ದೇವರು ಬೀಜವಾಗಿದ್ದು, ಪ್ರಪಂಚವು ಗಿಡದಂತೆ ಹುಟ್ಟಿದೆ. ಆದುದರಿಂದ ಗಿಡಕ್ಕಿಂತ ಮೊದಲು ಬೀಜವೇಯೆಂದು ಹೇಳಬಹುದು. ಎಷ್ಟು ವಿಧಗಳಲ್ಲಿ ನೋಡಿದರೂ ಗಿಡಕ್ಕಿಂತ ಬೀಜವೇ ಮೊದಲು ಇರುವಂತೆ ತಿಳಿಯುತ್ತಿದೆ. ಆದುದರಿಂದ ಗಿಡಮೊದಲಾ ಬೀಜಮೊದಲಾ? ಎನ್ನುವ ಪ್ರಶ್ನೆ ಕೆಲವರಿಗೆ ಬಗೆಹರಿಯದ ಸಮಸ್ಯೆಯಾಗಿ ಇದ್ದರೂ ನಮಗೆ ಮಾತ್ರ ನುಂಗಲಾಗುವ ಬೆಣ್ಣೆಯಂತೆ ಇದೆಯೆಂದು ಹೇಳುತ್ತಿದ್ದೇವೆ. ಈಗ ನಿನಗೆ ಬೀಜವಾದವನು ಯಾರೋ ನೋಡಿಕೊಂಡು ಅವನನ್ನೇ ನೀನು ಆಶ್ರಯಿಸಿದಂತಾದರೆ ನಿನ್ನ ಜೀವನಕ್ಕೆ **ಸಾರ್ಥಕತೆ** ಏರ್ಪಡುತ್ತದೆ.

ಇಂತಿ

**ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ**

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

––ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 09611133635**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




**ಪ್ರಬೋಧ ಸೇವಾ ಸಮಿತಿ (P.S.S.)**

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

***www. thraithashakam.org***

# ಗಿಡ ಮೊದಲಾ!
# ಬೀಜ ಮೊದಲಾ?







ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, ದಶ ಅಷ್ಟಾಧಿಕ (88) ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org